# ಮರಣ ರಹಸ್ಯ




ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

www.thraithashakam.org







# ಮರಣ ರಹಸ್ಯ


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 60/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : ಶ್ರೀನಿವಾಸ–09705864675, ಲಕ್ಷ್ಮೀನಾರಾಯಣಾಚಾರಿ–09440556968.

ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**

ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A

Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**

ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).

ಪಿನ್–572150, Cell : 9448177812

**ಶಿವರಾಜ**

(ಸಾ)(ಕಿ) ಕುಕನೂರು (ಪೊ) ಚಿಕ್ಕಸೂಗುರು (ತಾ), ರಾಯಚೂರು (ಜಿ)

Cell : 98443 69516

**R.S. ವೀರಾಚಾರಿ**

ಕತ್ತರಗುಪ್ಪೆ, ವಾರ್ಡ್.ನಂ.–38, ಬೆಂಗಳೂರು–560085

Cell : 9036982829

**G. ಮನೋಹರ್**

ಮಲ್ಲಸಂದ್ರ, ಟಿ. ದಾಸರಹಳ್ಳಿ ಬೆಂಗಳೂರು–560057

Cell : 7411459912, 9448452963.

**B. ವಾತ್ಸಲ್ಯ**

ರೈಲ್ವೇ ಸ್ಟೇಷನ್ ಹತ್ತಿರ, ಪಿ.ಬಿ.ರೋಡ್, ದಾವಣಗೆರೆ–577002

Cell : 9901534677, 8880666529

**ಬಸವರಾಜ ಅಂಗಡಿ**

(ಸಾ) (ಪೊ) ಪೋತ್ನಾಳ, (ತಾ) ಮಾನವಿ, ರಾಯಚೂರು (ಜಿ)

Cell : 9632418716

**ಸೂರ್ಯ ಪ್ರಕಾಶ**

ಟೈಪ್ 'ಸಿ' (ಸಾ) (ಪೊ) ಶಕ್ತಿನಗರ (ತಾ), ರಾಯಚೂರು (ಜಿ)

Cell : 9611183107, 9164886981

**ಲೀಲಾವತಿ**

ಮಾರುತಿ ಟೆನ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097

Cell : 9986369118

**T.V. ರಮಣ**

ಕತ್ತರಗುಪ್ಪೆ, ವಾರ್ಡ್.ನಂ. –38, ಬೆಂಗಳೂರು–560068

Cell : 08970772028, 07411459912, 07406039453

**M. ನಾರಾಯಣರೆಡ್ಡಿ**

(Bsc census department retired supervisor)

ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್, ಬೆಂಗಳೂರು–560066

Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಮರಣ ರಹಸ್ಯ



ಮರಣ ಎಂದರೆ ಸತ್ತುಹೋಗುವುದು ಎಂದು ಎಲ್ಲರಿಗೂ ತಿಳಿದಿದೆ. ಸಾವು ಹುಟ್ಟುಗಳು ಪ್ರತಿ ಜೀವಿಗೂ ಇವೆ. ಹುಟ್ಟಿನಿಂದ ಜೀವಿಗೆ ಜೀವನ ಪ್ರಾರಂಭವಾಗುತ್ತದೆ. ಮರಣದಿಂದ ಜೀವನ ಅಂತ್ಯವಾಗುತ್ತದೆ. ಜೀವಿಯ ಹುಟ್ಟು ಸಾವುಗಳ ಮಧ್ಯ ಕಾಲವನ್ನು ಜೀವನ ಅನ್ನುತ್ತೇವೆ. ಒಬ್ಬ ಜೀವಿಗೆ ಜನ್ಮ ಬೇಕೆಂದರೆ ಒಂದು ಶರೀರ ಇರಲೇಬೇಕು. ಹಾಗೆಯೆ ಜೀವಿಗೆ ಮರಣ ಬರಬೇಕೆಂದರೂ ಅವನಿಗೆ ಶರೀರವು ಇರಲೇಬೇಕು. ಹೊಸ ಶಿಶು ಶರೀರ ಇರುವಾಗ ಆ ಶರೀರದೊಳಗೆ ಜೀವಿಯು ಸೇರುವುದನ್ನು ಜನ್ಮ ಅಥವಾ ಜನನ ಎನ್ನುತ್ತಿದ್ದೇವೆ. ಇದು ಎಲ್ಲರಿಗೂ ತಿಳಿದ ವಿಷಯಗಳಂತೆ ಕಾಣಿಸಿದರೂ, ಶರೀರ ಪರಿಶೋಧಕರಿಗೂ ಸಹ ತಿಳಿಯದ ರಹಸ್ಯವಿದೆ, ಅದೇ ಜನನ ರಹಸ್ಯ. ಇಲ್ಲಿಯವರೆಗೂ ತಿಳಿಯದ ಜನನ ರಹಸ್ಯವನ್ನು ಸಿದ್ಧಾಂತ ರೂಪದಲ್ಲಿ ಗ್ರಂಥರೂಪವಾಗಿ ತಿಳಿಸಿದ್ದೇವೆ. ನಾವು ತಿಳಿಸಿದ **“ಜನನ ಮರಣ ಸಿದ್ಧಾಂತ”** ವಿಜ್ಞಾನರಂಗದಲ್ಲಿ (ಸೈನ್ಸ್‌ನಲ್ಲಿ) ಒಂದು ಹೊಸ ತಿರುವಿನಂತಹುದು. ಮನುಷ್ಯನಿಗೆ ತಿಳಿಯದ ಜನನವನ್ನು ಕುರಿತು ಹಾಗೂ ಮನುಷ್ಯನಿಗೆ ತಿಳಿಯದ ಮರಣವನ್ನು ಕುರಿತು ಜನನ ಮರಣ ಸಿದ್ಧಾಂತದಲ್ಲಿ ವಿಜ್ಞಾನರೂಪದಲ್ಲಿ ವಿವರವಾಗಿ ತಿಳಿಸಿದ್ದೇವೆ. ಈಗ ಮುಖ್ಯವಾಗಿ ಹೇಳುವುದೇನೆಂದರೆ! ಜನನ ನಡೆದುಹೋಗಿದೆ. ನಂತರ ಬರಬೇಕಾಗಿರುವುದು ಮರಣ. ಆದ್ದರಿಂದ ಬರುವ ಮರಣವನ್ನು ಕುರಿತು ತಿಳಿದುಕೊಳ್ಳುವುದು ಮನುಷ್ಯನಿಗೆ ಬಹಳ ಮುಖ್ಯ. ಆದರೆ ಮರಣವನ್ನು ಕುರಿತು ಸಹ ಮರಣ ಸಿದ್ಧಾಂತದಲ್ಲಿ ತಿಳಿಸಿದ್ದೇವೆ. ಅಷ್ಟೇ ಅಲ್ಲದೆ ಮತ್ತೆ ಕೆಲವು ಗ್ರಂಥಗಳಲ್ಲಿಯೂ ಸಹ ಮರಣ ಎರಡು ವಿಧಗಳಿವೆ ಎಂದು, ಒಂದು ಕಾಲಮರಣವೆಂದು, ಎರಡನೆಯದು ಅಕಾಲಮರಣವೆಂದು ಸಹ ತಿಳಿಸಿದ್ದೇವೆ. ಇದರಿಂದ ಮನುಷ್ಯನಿಗೆ ಜನ್ಮ ಒಂದೇ ವಿಧವೆಂದು, ಮರಣಗಳು ಎರಡು ವಿಧಗಳೆಂದು ತಿಳಿದುಹೋಗಿದೆ. ನಾವು ತಿಳಿಸಿರುವುದು ಶಾಸ್ತ್ರಬದ್ಧವಾದ ಸಮಾಚಾರ, ಆದ್ದರಿಂದ ಯಾರೂ ಖಂಡಿಸುವುದಕ್ಕೆ ಸಾಧ್ಯವಿಲ್ಲ. ನಾವು ಮೊದಲೇ ಇದು ಭೌತಿಕಶಾಸ್ತ್ರಜ್ಞರಿಗೂ ಸಹ ತಿಳಿಯದ ಸಮಾಚಾರವೆಂದು ಹೇಳಿದ್ದೇವೆ. ನಮಗೆ ತಿಳಿಯದಿರುವುದಾ ಎಂದು ಯಾರಾದರೂ ನಾವು ಹೇಳಿದ

ವಿಷಯವನ್ನು ಖಂಡಿಸಬೇಕೆಂದು ನೋಡಿದರೂ, ನಮ್ಮದು ಶಾಸ್ತ್ರಸಮ್ಮತವಾದ ಸಿದ್ಧಾಂತ, ಆದ್ದರಿಂದ ಅದನ್ನು ಯಾರು ಖಂಡಿಸಲಾರರು.

ಈಗ ಪ್ರತ್ಯೇಕಿಸಿ ಹೇಳುವುದು ಏನೆಂದರೆ! ಮರಣವು ಕಾಲ, ಅಕಾಲ ಎಂದು ಎರಡು ವಿಧಗಳಾಗಿದ್ದರೂ, ಮೂರನೆ ವಿಧವಾದ ಮರಣವೂ ಸಹ ಒಂದು ಇದೆ. ಮೂರನೆ ವಿಧವು ವಾಸ್ತವಕ್ಕೆ ನಮ್ಮ ಲೆಕ್ಕದಲ್ಲಿ ಮರಣ ಅಲ್ಲದಿದ್ದರೂ, ಪ್ರಜೆಗಳ ಲೆಕ್ಕದಲ್ಲಿ ಮರಣವೆ! ಆದ್ದರಿಂದ ಅದನ್ನು ಸಹ ಮೂರನೆ ಮರಣವಾಗಿ ಹೇಳಬೇಕಾಗಿ ಬಂದಿದೆ. ಇಲ್ಲಿಯವರೆಗೂ ಸೈನ್ಸು ತಿಳಿದವರಿಗೆ **ಕಾಲ ಮರಣವನ್ನು** ಕುರಿತೆ ತಿಳಿದಿದೆ. ಎರಡನೆ ವಿಧವಾದ **ಅಕಾಲ ಮರಣವನ್ನು** ಕುರಿತು ತಿಳಿದಿಲ್ಲ. ಮೂರನೆಯದಾದ **ತಾತ್ಕಾಲಿಕ ಮರಣವನ್ನು** ಕುರಿತು ಇಂದಿನ ಕಾಲದಲ್ಲಿ, ನೂರಕ್ಕೆನೂರರಷ್ಟು ಯಾರಿಗೂ ತಿಳಿದಿಲ್ಲವೆಂದೇ ಹೇಳಬಹುದು. ಇಂದಿನ ಕಾಲದಲ್ಲಿ ಮೂರನೇ ವಿಧವಾದ ತಾತ್ಕಾಲಿಕ ಮರಣವನ್ನು ಕುರಿತು ಯಾರಿಗೂ ತಿಳಿಯದೆ ಹೋದರು, ಪೂರ್ವಕಾಲದಲ್ಲಿ ಕೆಲವರಿಗೆ ಇದರ ವಿಷಯ ತಿಳಿದಿದೆಂಬುವುದಕ್ಕೆ ಕೆಲವು ಆಧಾರಗಳಿವೆ. ಆ ಆಧಾರಗಳನ್ನು ನಂತರ ಹೇಳಿಕೊಳ್ಳೋಣ. ಈಗ ಮರಣ ಎನ್ನುವುದು ಕರ್ಮಕ್ಕೆ ಸಂಬಂಧಿಸಿರುವುದಾ? ಇಲ್ಲವೆ ಕರ್ಮಕ್ಕೆ ಅತೀತವಾಗಿರುವುದಾ? ಎಂದು ಬಹಳ ಜನರು ಆಧ್ಯಾತ್ಮಿಕ ಜ್ಞಾನಿಗಳನ್ನು ಕೇಳಿದರೆ ಕರ್ಮವನ್ನನುಸರಿಸಿಯೇ ಮರಣ, ಕರ್ಮವನ್ನನು ಸರಿಸಿಯೇ ಜನನ ಎಂದು ಹೇಳುತ್ತಿದ್ದಾರೆ. ಈ ಪ್ರಶ್ನೆಗೆ ನಾವು ಹೇಳುವ ಉತ್ತರ ಏನೆಂದರೆ! ಮನುಷ್ಯನಿಗಾಗಲಿ, ಪ್ರಾಣಿಗಳಿಗಾಗಲಿ, ಜೀವವಿರುವ ಯಾವ ಪ್ರಾಣಿಗಾಗಲಿ ಜನನ ಮರಣಗಳು ಸಹಜ ಸಿದ್ಧವಾದವು ಮಾತ್ರವೆ. ಜನನ ಮರಣಗಳು ಜೀವರಾಶಿಗಳಿಗೆ ಪ್ರಕೃತಿ ಸಿದ್ಧವಾದವುಗಳಾಗಿವೆ. ಸಾವುಹುಟ್ಟುಗಳು ಕರ್ಮಕ್ಕೆ ಅತೀತವಾದವು. ಅವರವರ ಕರ್ಮವನ್ನನುಸರಿಸಿ ಮರಣಿಸುವ ಸಮಯ, ಮರಣಿಸುವ ಸ್ಥಳ, ಮರಣಿಸುವಾಗ ಜೀವಿಯ ಪರಿಸ್ಥಿತಿ, ಮರಣಿಸುವ ಸಮಯದಲ್ಲಿ ಇರಬೇಕಾದ ಆರೋಗ್ಯ, ಅನಾರೋಗ್ಯವೂ, ಶರೀರ ಬಲ, ಶರೀರ ವಯಸ್ಸು ನಿರ್ಣಯಿಸಲ್ಪಟ್ಟಿರುತ್ತದೆ. ಆದರೆ ಮರಣವಾಗಲಿ, ಜನನವಾಗಲಿ

ಕರ್ಮಕ್ಕೆ ಸಂಬಂಧವಿಲ್ಲದ ಪ್ರಕೃತಿ ಸಿದ್ಧವಾದ ಪ್ರಕ್ರಿಯೆಗಳು. ಕೇವಲ ಮರಣವನ್ನು ಕುರಿತು ಹೇಳಿಕೊಂಡರೆ, ಮರಣ ಜೀವಿಗೆ ಯಾವ ಅನುಭೂತಿ ಇಲ್ಲದ ಸ್ಥಿತಿ. ಆದ್ದರಿಂದ ಅನುಭವ ಇಲ್ಲದಿರುವುದನ್ನು ಕರ್ಮಕ್ಕೆ ಅಂಟಿಸಬಾರದು. ಅನುಭವಕ್ಕೆ ಬರುವುದು ಏನಾದರು ಕರ್ಮಕ್ಕೆ ಸಂಬಂಧಿಸಿರುವುದೇ ಆಗುತ್ತದೆ. ಮರಣವು ಅನುಭವ ಇಲ್ಲದಿರುವುದು. ಆದ್ದರಿಂದ ಕರ್ಮಕ್ಕೆ ಅತೀತವಾದುದು. ಜೀವಿಗೆ ಜನ್ಮ ಉಂಟಾದ ನಂತರ ಪ್ರಾರಬ್ಧಕರ್ಮ ಆರಂಭವಾಗುತ್ತದೆ. ಹಾಗೆಯೇ ಜೀವಿಗೆ ಪ್ರಾರಬ್ಧಕರ್ಮ ಮುಗಿದುಹೋದ ನಂತರ ಮರಣ ಉಂಟಾಗುತ್ತದೆ. ಆದ್ದರಿಂದ ಜನನ ಮರಣಗಳು ಎರಡೂ ಕರ್ಮಕ್ಕೆ ಅತೀತವಾದವೆ ಎಂದು ಹೇಳುತ್ತಿದ್ದೇವೆ.



# ಮರಣ ಎಂದರೆ ಏನು?

ಒಂದು ಜೀವಿಯ ಜೀವನ ಮುಗಿದರೆ ಅದನ್ನು ಸತ್ತುಹೋಗುವುದು ಅಥವಾ ಮರಣಿಸುವುದು ಎನ್ನುತ್ತಾರೆ. ಇವುಗಳಲ್ಲಿ **ಸತ್ತೋಗುವುದು** ಎನ್ನುವ ಪದವನ್ನು ಪೂರ್ವಕಾಲದಲ್ಲಿ **ಸತ್ತು ಹೋಗುವುದು** ಎಂದಾಗಲಿ, ಕಾಲಕ್ರಮದಲ್ಲಿ ಅಜ್ಞಾನ ಬೆಳೆದುಹೋಗಿ, ಸತ್ತು ಎನ್ನುವ ಪದಕ್ಕೆ ಅರ್ಥ ತಿಳಿಯದಂತೆಹೋಗಿ, ಮರಣ ಎನ್ನುವ ಪದ ಮಾತ್ರ ಪೂರ್ವದಿಂದ ಬದಲಾವಣೆಯಾಗದೆ ಒಂದೇ ವಿಧವಾಗಿ ಹೇಳಲಾಗುತ್ತಿದೆ. ಬದುಕಿದ ಮನುಷ್ಯ ಶರೀರದಲ್ಲಿ ಎರಡು ಆತ್ಮಗಳು ಇರುವುದು ಸಹಜ. ಇದು ಒಬ್ಬ ಮನುಷ್ಯನ ಶರೀರದಲ್ಲಿಯೇ ಅಲ್ಲದೆ, ಜೀವವಿರುವ ಯಾವ ಜಾತಿಯ ಶರೀರದಲ್ಲಾಗಲಿ ಎರಡು ಆತ್ಮಗಳಿರುವುದು ಸಿದ್ಧಾಂತ. ಇನ್ನು ವಿವರವಾಗಿ ಹೇಳಿಕೊಂಡರೆ ಯೋಗಶಾಸ್ತ್ರದ (ಬ್ರಹ್ಮವಿದ್ಯಾಶಾಸ್ತ್ರ) ಪ್ರಕಾರ ಸಜೀವ ಶರೀರದಲ್ಲಿ ಮೂರು ಆತ್ಮಗಳಿರುವುದು ಸಹಜ. ಅದರಲ್ಲಿ ಒಂದು ಆತ್ಮ ಮಾತಿಲ್ಲ ಕತೆಯಿಲ್ಲ, ಕೆಲಸ ಮಾಡುವುದಿಲ್ಲ, ತಟಸ್ಥವಾಗಿರುವುದು ಮಾತ್ರವೆ. ಆದ್ದರಿಂದ ನಾವು ಈಗ ಹೇಳಿಕೊಳ್ಳಬೇಕಾಗಿರುವುದು ಎರಡು

ಆತ್ಮಗಳನ್ನು ಕುರಿತು ಮಾತ್ರವೆ. ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಆತ್ಮಗಳಲ್ಲಿ ಪರಮಾತ್ಮ ಯಾವ ಕೆಲಸವನ್ನು ಮಾಡುವುದಿಲ್ಲ ಮತ್ತು ಸುಮ್ಮನಿರುವುದು ಹೊರತು ಯಾವುದೆ ಕೆಲಸಕ್ಕೆ ಬರುವುದಿಲ್ಲ. ಇನ್ನು ಶರೀರದಲ್ಲಿ ಉಳಿದ ಆತ್ಮ, ಜೀವಾತ್ಮ ಎನ್ನುವ ಎರಡು ಆತ್ಮಗಳು ಮಾತ್ರವೆ ಕೆಲಸವನ್ನು ಮಾಡುವುದಾಗಿವೆ. ಶರೀರದಲ್ಲಿನ ಜೀವಾತ್ಮವೇ ನಾನು ಇಂತಹದೆಂದು ಹೇಳಿಕೊಳ್ಳುತ್ತದೆ ಮತ್ತು ನಾನು ಎನ್ನುವ ಭಾವನೆಯನ್ನು ಹೊಂದಿ ಶರೀರದಲ್ಲಿನ ಕಷ್ಟ ಸುಖಗಳನ್ನು ಅನುಭವಿಸುತ್ತದೆ. ಅಷ್ಟೆ ಹೊರತು ಶರೀರದಲ್ಲಿನ ಜೀವಿಗೆ ಯಾವ ಕೆಲಸವು ಇಲ್ಲ. ಇನ್ನು ಹೋದರೆ ಶರೀರದಲ್ಲಿನ ಪ್ರತಿ ಕೆಲಸವನ್ನು ಆತ್ಮ ಮಾಡುತ್ತದೆ. ಇಲ್ಲಿ ಮುಖ್ಯವಾಗಿ ಹೇಳಬೇಕಾಗಿರುವ ವಿಷಯ ಏನೆಂದರೆ **ಶರೀರದಲ್ಲಿ ಜೀವಿ ಎಂಬ ತಾನು ಹೊರತು ಆತ್ಮ ಒಂದಿದೆ ಎಂದಾಗಲಿ, ಬರೆಯುವುದು, ಮಾಡುವುದು, ಮಾತನಾಡುವುದು, ಹೊಡೆದಾಡುವುದು, ನೋಡುವುದು, ಆಡುವುದು ಸಮಸ್ತ ಕೆಲಸಗಳೆಲ್ಲವೂ ಆತ್ಮ ಮಾಡುತ್ತಿದೆ ಎಂದಾಗಲಿ ಯಾರಿಗೂ ತಿಳಿಯದು**. ಶರೀರದಲ್ಲಿ ಒಳ್ಳೆಯ ಕೆಟ್ಟ ಕೆಲಸಗಳು ಮಾಡುತ್ತಿರುವುದು ಆತ್ಮವೇ ಎಂದು ತಿಳಿಯದೆ, ಎಲ್ಲರೂ ತಾವೇ ಎಲ್ಲಾ ಮಾಡುತ್ತೇವೆಂದು ಅಂದುಕೊಳ್ಳುತ್ತಿದ್ದಾರೆ.

ಯಾರಿಗೆ ತಿಳಿದರೂ, ಯಾರಿಗೆ ತಿಳಿಯದಿದ್ದರೂ ಶರೀರದಲ್ಲಿ ಮುಖ್ಯಪಾತ್ರ ಪೋಷಿಸುವುದು ಆತ್ಮವೇ. ಶರೀರದಲ್ಲಿ ಜೀವಾತ್ಮ ಇದ್ದರೆ ಆತ್ಮ ತಪ್ಪದೆ ಇರುತ್ತದೆ. ಆದ್ದರಿಂದ ಜೀವಾತ್ಮನಿಗೆ, ಆತ್ಮ ಜೋಡಿ ಆತ್ಮ ಎಂದೂ, ಪಕ್ಕದಲ್ಲಿಯೇ ಇರುವುದರಿಂದ ಪಕ್ಕದ ಆತ್ಮ ಅಥವಾ ಸಹಚರನೆಂದು, ಶರೀರದಲ್ಲಿ ಎಲ್ಲಾ ಅವಯವಗಳಿಗೂ ಶಕ್ತಿಯನ್ನು ಕೊಡುವುದರಿಂದ ಸತ್ತುವ (ಬಲ) ಅಥವಾ ಸತ್ತು ಎಂದೂ ಸಹ ಆತ್ಮವನ್ನು ಕರೆಯಲಾಗುತ್ತದೆ. ಸತ್ತುಹೋದಾಗ ಶರೀರದಲ್ಲಿನ ಕದಲುವ ಸತ್ತು ಎಲ್ಲವೂ ಹೋಗುವುದರಿಂದ ಎಂದರೆ ಆತ್ಮ ಹೋಗುವುದರಿಂದ ಸತ್ತುಹೋಗಿದೆ ಎಂದು ಪೂರ್ವದಲ್ಲಿ ಆಧ್ಯಾತ್ಮಿಕ ತಜ್ಞರನ್ನುತ್ತಿದ್ದರು. ಪೂರ್ವ ಕಾಲದಲ್ಲಿ ಆತ್ಮವನ್ನು ಅಧ್ಯಯನ ಮಾಡಿದ ಆಧ್ಯಾತ್ಮಿಕ ಜ್ಞಾನಿಗಳು ಶರೀರದಲ್ಲಿ

ಜೀವಿಯನ್ನು ಲೆಕ್ಕಿಸದೆ, ಆತ್ಮವನ್ನೇ ಮುಖ್ಯವಾಗಿ ಪರಿಗಣಿಸಿದವರಾಗಿ, ಮರಣಿಸಿದ ಮನುಷ್ಯನನ್ನು ನೋಡಿ ಇಂತಹವನ ಸತ್ತು ಹೋಗಿದೆ ಎಂದು ಇಂತಹವನು ಸತ್ತುಹೋಗಿದ್ದಾನೆ ಎನ್ನುತ್ತಿದ್ದರು. ಹಾಗೆಯೇ ಹಸು ಮರಣಿಸಿದರೆ ಅದನ್ನು ನೋಡಿ ಹಸು ಸತ್ತು ಹೋಗಿದೆ ಎನ್ನುತ್ತಿದ್ದರು.

ಇನ್ನು ಬದಲಾವಣೆಯಾಗದ **ಮರಣ** ಎನ್ನುವ ಮಾತನ್ನು ಕುರಿತು ವಿವರಿಸಿಕೊಳ್ಳೋಣ. ಈ ಪದದಲ್ಲಿ **'ಮರ'** ಎನ್ನುವ ಶಬ್ಧವಿದೆ **"ಮರ"** ಎಂದರೆ ನಾಶ ಮಾಡುವುದೆಂದು ಅರ್ಥ. **"ರಣ"** ಎಂದರೆ ಯುದ್ಧ ಎಂದು ಅರ್ಥ. ಮರ+ರಣ=ಮರಣ. ಮರಣ ಎನ್ನುವ ಶಬ್ದದಲ್ಲಿ ನಾಶ ಮಾಡುವ ಯುದ್ಧವೆಂದು ಅರ್ಥವಿದೆ. ಶರೀರ ನಾಶವಾಗುವುದಕ್ಕೆ ನಡೆಯುವ ಕ್ರಿಯೆ ಆರಂಭವಾಗುವುದನ್ನು ಮರಣ ಎನ್ನುತ್ತಿದ್ದೇವೆ. ಜೀವಿಯೂ ಮತ್ತು ಆತ್ಮ ಶರೀರವನ್ನು ಬಿಟ್ಟ ತಕ್ಷಣ ಶರೀರದಲ್ಲಿನ ಧಾತುಗಳಲ್ಲಿ ಯುದ್ಧದಂತಹ ಕೆಲಸ ಆರಂಭವಾಗುತ್ತದೆ. ಶೀಘ್ರವೇ ಶರೀರವು ನಾಶವಾಗುವುದಕ್ಕೆ ಪ್ರಾರಂಭವಾಗುತ್ತದೆ. ಶರೀರವು ಜೀರ್ಣಿಸಿ ಹೋಗುವ ಕ್ರಿಯೆ ಯುದ್ಧದಂತೆ ವೇಗವಾಗಿ ನಡೆಯುತ್ತದೆ ಎಂದು ತಿಳಿಯುವುದಕ್ಕೆ ಅದನ್ನು ಮರಣ ಎಂದಿದ್ದಾರೆ. ಮರಣ ಮುಖ್ಯವಾಗಿ ಎರಡು ವಿಧಗಳೆಂದು ಒಂದು ಕಾಲ ಮರಣವೆಂದು, ಎರಡನೆಯದು ಅಕಾಲ ಮರಣವೆಂದು ತಿಳಿದುಕೊಂಡಿದ್ದೇವೆ. ಈ ಎರಡು ಮರಣಗಳಲ್ಲಿಯೂ ಶರೀರವು ನಾಶವಾಗುತ್ತದೆ. ಮಾನವನ ಶರೀರವನ್ನು ವಿಭಜಿಸಿ ನೋಡಿದರೆ ಸೂತ್ರಬದ್ಧವಾಗಿ 24 ಭಾಗಗಳಾಗಿ ಇದೆ. ಜೀವಿಯೊಂದಿಗೆ 25 ಭಾಗಗಳಾಗುತ್ತವೆ. ಆತ್ಮದೊಂದಿಗಾದರೆ 26 ಭಾಗಗಳಾಗುತ್ತವೆ. ಜೀವಿ ಇರುವ ಕಡೆ ಆತ್ಮ ಇರುತ್ತದೆ. ಆದ್ದರಿಂದ ಆತ್ಮವನ್ನು ಬಿಟ್ಟು ಜೀವಿಯನ್ನು ಲೆಕ್ಕಹಾಕಿ ನೋಡಿದರೆ ಒಟ್ಟು 25 ಭಾಗಗಳಾಗಿ ಶರೀರವಿದೆ. ಶರೀರದಲ್ಲಿ ಪ್ರತ್ಯೇಕವಾದ ಕೆಲಸ ಮಾಡುವುದು ಪ್ರತ್ಯೇಕ ಭಾಗ ಎನ್ನುವ ಸೂತ್ರದ ಪ್ರಕಾರ ಲೆಕ್ಕಹಾಕಿ ನೋಡಿದರೆ ಜೀವಾತ್ಮನೊಂದಿಗೆ ಸಹ 25 ವಿಧಗಳ ಭಾಗಗಳು ಏರ್ಪಡುತ್ತವೆ. 25 ಶರೀರ ಭಾಗಗಳಲ್ಲಿ ಭೌತಿಕವಾಗಿ ಕಾಣಿಸುವ ಭಾಗಗಳು 10 ಮಾತ್ರ ಇವೆ, ಅಭೌತಿಕವಾಗಿ ಕಾಣಿಸದ ಭಾಗಗಳು 15 ಇವೆ. ಮೇಲಕ್ಕೆ

ಕಾಣಿಸುವ ಶರೀರ ಭಾಗಗಳನ್ನು ಸ್ಥೂಲಶರೀರವೆಂದು, ಕಾಣಿಸದ ಭಾಗಗಳನ್ನು ಸೂಕ್ಷ್ಮಶರೀರವೆಂದು ಎನ್ನುತ್ತಿದ್ದೇವೆ. ಈಗ ಸ್ಥೂಲ ಶರೀರದಲ್ಲಿನ 10 ಭಾಗಗಳನ್ನು, ಸೂಕ್ಷ್ಮ ಶರೀರದಲ್ಲಿನ 15 ಭಾಗಗಳನ್ನು ಕೆಳಗೆ ನೋಡೋಣ

| ಸ್ಥೂಲ ಶರೀರಭಾಗಗಳು | ಸೂಕ್ಷ್ಮಶರೀರಭಾಗಗಳು | |
|---|---|---|
| 1. ಕಣ್ಣು | 1. ಜೀವಾತ್ಮ | 11. ವ್ಯಾನವಾಯು |
| 2. ಮೂಗು | 2. ಮನಸ್ಸು | 12. ಸಮಾನವಾಯು |
| 3. ನಾಲಿಗೆ | 3. ಬುದ್ಧಿ | 13. ಉದಾನವಾಯು |
| 4. ಕಿವಿ | 4. ಚಿತ್ತ | 14. ಪ್ರಾಣವಾಯು |
| 5. ಚರ್ಮ | 5. ಅಹಮ್ | 15. ಅಪಾನವಾಯು |
| 6. ಕೈಗಳು | 6. ದೃಷ್ಟಿ | |
| 7. ಕಾಲುಗಳು | 7. ಶ್ರವಣ (ಆಲಿಸು) | |
| 8. ಬಾಯಿ | 8. ಸ್ಪರ್ಶ | |
| 9. ಗುದ | 9. ರುಚಿ | |
| 10. ಗುಹ್ಯ | 10. ವಾಸನೆ | |

ಒಂದು ಸಜೀವ ಶರೀರದಲ್ಲಿ 25 ಭಾಗಗಳಿರುವುದೇ ಅಲ್ಲದೆ, ಅವುಗಳೆಲ್ಲವನ್ನೂ ನಡೆಸುವ ಆತ್ಮವೂ ಸಹ ಇದೆ. ಕಾಲ ಮರಣದಲ್ಲಿ ಸ್ಥೂಲ, ಸೂಕ್ಷ್ಮ ಶರೀರ ಭಾಗಗಳಾದ 24 ಭಾಗಗಳನ್ನು ಬಿಟ್ಟು ಜೀವಾತ್ಮ, ಆತ್ಮ, ಹೊರಟುಹೋಗುತ್ತಾರೆ. ಆದರೆ ಸ್ಥೂಲ ಶರೀರವನ್ನು ಮಾತ್ರ ಬಿಟ್ಟು ಸೂಕ್ಷ್ಮ ಶರೀರವಾದ 14 ಭಾಗಗಳೊಂದಿಗೆ ಜೀವಿಯು, ಆತ್ಮ ಸಹ ಇರುವುದನ್ನು ಆಕಾಲ ಮರಣ ಎನ್ನುತ್ತೇವೆ. ಅಕಾಲ ಮರಣದಲ್ಲಿ ಜೀವಾತ್ಮ, ಆತ್ಮ ಉಳಿದ 14 ಭಾಗಗಳ ಸೂಕ್ಷ್ಮ ಶರೀರ ಇರುವುದರಿಂದ ಅದು ಮರಣವಲ್ಲ. ಮನುಷ್ಯರಿಗೆ ಕಾಣಿಸುವ ಸ್ಥೂಲಶರೀರ ಬಿದ್ದುಹೋಗುವುದರಿಂದ, ಮೇಲ್ನೋಟಕ್ಕೆ ಅದು ಮರಣವೇ ಆದರೂ, ಅದನ್ನು ಅಕಾಲ ಮರಣವೆಂದು ಹೇಳುತ್ತಿದ್ದೇವೆ. ಕಾಲ ಮರಣದಲ್ಲಿ ಜೀವಾತ್ಮ, ಆತ್ಮ ಮರುಜನ್ಮಕ್ಕೆ ಹೋಗುತ್ತಾರೆ. ಅಕಾಲ ಮರಣದಲ್ಲಿ

ಜೀವಾತ್ಮ, ಆತ್ಮ ಮರುಜನ್ಮಕ್ಕೆ ಹೋಗುವುದಿಲ್ಲ. ಏಕೆಂದರೆ ಅವರಿಗೆ ಸೂಕ್ಷ್ಮ ಶರೀರವಿದೆ. ಆದ್ದರಿಂದ ಸೂಕ್ಷ್ಮಶರೀರದಲ್ಲಿ ಜೀವಾತ್ಮ ಇನ್ನು ಸ್ವಲ್ಪಕಾಲ ಬದುಕಬೇಕಾಗಿರುವುದು ಇದೆ. ಅಂತಹ ಸೂಕ್ಷ್ಮ ಶರೀರವಿರುವವನಿಗೆ ಶ್ವಾಸವೂ ಸಹ ನಡೆಯುತ್ತಲೆ ಇದೆ. ಸ್ಥೂಲ ಶರೀರ ಶ್ವಾಸ (ಪ್ರಾಣ) ಇಲ್ಲದ್ದಾಗಿ ಬಿದ್ದುಹೋಗುವುದರಿಂದ, ಅದನ್ನು ಮರಣವೇ ಎಂದು ಎಲ್ಲರೂ ಹೇಳಿದರೂ, ಅದು ಪೂರ್ತಿ ಮರಣವಲ್ಲ. ಶಾಸ್ತ್ರಬದ್ಧವಾದ ಮರಣಕ್ಕೆ ಒಂದು ಸಿದ್ಧಾಂತವಿದೆ. ಶ್ವಾಸ ಶರೀರದಿಂದ ಹೊರಗೆ ಹೋಗಿ ಮತ್ತೆ ಶರೀರದೊಳಗೆ ಸೇರದೆಹೋದರೆ ಅದು ಮರಣವಾಗುತ್ತದೆ. ಅದನ್ನೇ ನೂರಕ್ಕೆ ನೂರು ಪಾಲು ಮರಣವೆಂದು ಹೇಳಬಹುದು. ಶ್ವಾಸ ಸರ್ವಸಾಧಾರಣವಾಗಿ ಆಡುತ್ತಿರುವಾಗ ಸ್ಥೂಲಶರೀರವನ್ನು ಬಿಟ್ಟರೂ ಅದು ಪೂರ್ತಿ ಮರಣವಲ್ಲ. ಅವನು ಕಾಣಿಸದ ಶರೀರದಿಂದಲೇ ಬದುಕಿದ್ದಾನೆ. ಆದ್ದರಿಂದ ಅದನ್ನು ಅಕಾಲ ಮರಣ ಎನ್ನುತ್ತಿದ್ದೇವೆ. ಅಕಾಲ ಮರಣವನ್ನು ಹೊಂದಿದವನು ಕಾಣಿಸದಿದ್ದರೂ ಅವನು ನಮ್ಮ ಜೊತೆಯಲ್ಲಿಯೇ ಬದುಕಿದ್ದಾನೆಂದು ಜ್ಞಾಪಕ ಇಟ್ಟುಕೊಳ್ಳಿ.



# ತಾತ್ಕಾಲಿಕ ಮರಣ

ಕಾಲಮರಣದಲ್ಲಿ ಜೀವಿಯು, ಆತ್ಮ ಶರೀರವನ್ನು ಬಿಟ್ಟುಹೋಗಿ ಮರುಜನ್ಮಕ್ಕೆ ಹೋಗುತ್ತಿದ್ದಾರೆ. ಅಕಾಲ ಮರಣದಲ್ಲಿ ಜೀವಿಯು, ಆತ್ಮ ಅರ್ಧ ಶರೀರವನ್ನು ಬಿಟ್ಟು ಅರ್ಧ ಶರೀರದೊಳಗೆ ವಾಸಿಸುತ್ತಿದ್ದಾನೆ. ಇನ್ನು ಮರಣ ಅಂದುಕೊಂಡು ತಪ್ಪಾಗಿ ತಿಳಿಯುತ್ತಿರುವ ತಾತ್ಕಾಲಿಕ ಮರಣವನ್ನು ಕುರಿತು ವಿವರಿಸಿಕೊಳ್ಳೋಣ. ತಾತ್ಕಾಲಿಕ ಮರಣ ಎನ್ನುವುದನ್ನು ಮೂರನೆ ಮರಣವಾಗಿ ಹೇಳಿಕೊಳ್ಳಬಹುದು. ವಾಸ್ತವಕ್ಕೆ ಇದು ಮರಣವೇ ಅಲ್ಲದಿದ್ದರೂ ಹಾಗೆ ಹೇಳಬೇಕಾಗಿ ಬಂದಿದೆ. ಈ ಮೂರನೇ ವಿಧವಾದ ಮರಣದಲ್ಲಿ ಜೀವಾತ್ಮ, ಆತ್ಮ ಸ್ಥೂಲಶರೀರವನ್ನಾಗಲಿ, ಸೂಕ್ಷ್ಮಶರೀರವನ್ನಾಗಲಿ ಬಿಟ್ಟುಹೋಗುವುದಿಲ್ಲ. ಈ ತಾತ್ಕಾಲಿಕ ಮರಣದಲ್ಲಿ ಜೀವಾತ್ಮ ಶರೀರವನ್ನು ಬಿಟ್ಟುಹೋಗದಂತೆ

ಶರೀರದಲ್ಲಿಯೇ ಇರುತ್ತಾನೆ. ಕಾಲ ಮರಣದಲ್ಲಿಯೂ, ಅಕಾಲ ಮರಣದಲ್ಲಿಯೂ ಜೀವಿಯು ಸ್ಥೂಲ ಶರೀರವನ್ನು ಬಿಟ್ಟುಹೋಗುವುದರಿಂದ ಶರೀರದಲ್ಲಿನ ಚಲನಗಳು ಎಲ್ಲವೂ ನಿಂತುಹೋಗುತ್ತವೆ. ಆದ್ದರಿಂದ ಚಲನೆಯಾಗಲಿ, ಶ್ವಾಸವಾಗಲಿ ಇಲ್ಲದ ಶರೀರವನ್ನು ನೋಡಿ ಇವನು ಮರಣಿಸಿದ್ದಾನೆಂದು ಹೇಳುತ್ತಿದ್ದೇವೆ. ಆದರೆ ತಾತ್ಕಾಲಿಕ ಮರಣದಲ್ಲಿ ಜೀವಿಯು ಶರೀರವನ್ನು ಬಿಟ್ಟುಹೋಗದಿದ್ದರು, ಅದನ್ನು ಮರಣವೆಂದು ಏಕೆ ಎನ್ನುತ್ತಿದ್ದಾರೆಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ಮರಣ ಸಿದ್ಧಾಂತದಿಂದ ಕೂಡಿಕೊಂಡಿರುವುದಾದರೂ ಪ್ರಜೆಗಳು ಮಾತ್ರ ಕಾಣಿಸುವುದನ್ನೇ ನಂಬುತ್ತಿದ್ದಾರೆ. ಪ್ರಜೆಗಳಿಗೆ ಶ್ವಾಸ ಆಡಿದರೆ ಮನುಷ್ಯ ಬದುಕಿರುವಂತೆ, ಶ್ವಾಸ ಆಡದಿದ್ದರೆ ಮನುಷ್ಯ ಮರಣಿಸಿದ್ದಾನೆಂದು ಹೇಳುತ್ತಿದ್ದಾರೆ. ಕೊನೆಯ ಶ್ವಾಸದಿಂದಲೆ ಮರಣ ಬರುತ್ತದೆಂಬ ಸೂತ್ರ ಬಹಳಜನರಿಗೆ ತಿಳಿದಿಲ್ಲ. ಯಾವಾಗ ಶ್ವಾಸ ನಿಂತುಹೋದರೆ ಆಗ ಕೊನೆಯ ಶ್ವಾಸ ಮುಗಿದುಹೋದಂತೆ ಅಲ್ಲವೆ! ಎಂದು ಸಹ ಕೇಳುತ್ತಿದ್ದಾರೆ. ಮೊದಲನೆಯದಾದ ಕಾಲ ಮರಣದಲ್ಲಿ ಮಾತ್ರ ಕೊನೆಯ ಶ್ವಾಸ ಹೋದಂತೆ, ಮನುಷ್ಯ ಮರಣಿಸಿದಂತೆ ಹೇಳಬಹುದು. ಆದರೆ ಎರಡನೆಯದಾದ ಅಕಾಲ ಮರಣದಲ್ಲಿಯೂ ಸಹ ಮನುಷ್ಯನ ಕೊನೆಯ ಶ್ವಾಸವನ್ನು ಕುರಿತು ಹೇಳಲಾರೆವು. ಏಕೆಂದರೆ ಕಾಣಿಸುವ ಸ್ಥೂಲ ಶರೀರದಲ್ಲಿ ಶ್ವಾಸ ಆಡದಿದ್ದರು, ಕಾಣಿಸದ ಸೂಕ್ಷ್ಮಶರೀರದಲ್ಲಿ ಶ್ವಾಸ ಆಡುತ್ತದೆ. ಆದ್ದರಿಂದ ಅದು ಸಹ ಮರಣವಲ್ಲ. ಇನ್ನು ಮೂರನೆಯದಾದ ತಾತ್ಕಾಲಿಕ ಮರಣದಲ್ಲಿ ಸಿದ್ಧಾಂತದ ಪ್ರಕಾರ ಶರೀರ ವನ್ನು ಬಿಟ್ಟು ಶ್ವಾಸ ಹೋಗುವುದಿಲ್ಲ, ಆದ್ದರಿಂದ ಅದನ್ನು ಮರಣ ಎನ್ನುವುದಕ್ಕೆ ಸಹ ಸಾಧ್ಯವಿಲ್ಲ. ಆದರೆ ವಿಶೇಷವೇನೆಂದರೆ ಶರೀರದಲ್ಲಿ ಶ್ವಾಸ ಆಡದಂತೆ ನಿಂತುಹೋಗುವುದರಿಂದ ಮೂರನೆಯದನ್ನು ಸಹ ಪ್ರಜೆಗಳು ಮರಣ ಎನ್ನುತ್ತಿದ್ದಾರೆ.

ಮರಣ ಸಿದ್ಧಾಂತದ ಪ್ರಕಾರ ಕೊನೆಯ ಶ್ವಾಸದಿಂದ ಜೀವಿಯು ಶರೀರವನ್ನು ಬಿಟ್ಟುಹೋಗುತ್ತಾನೆಂದು ಹೇಳಿದ್ದೇವೆ. ಒಂದು ಕಾಲಮರಣದಲ್ಲಿ

ಮಾತ್ರವೇ ಕೊನೆಯ ಶ್ವಾಸ ಇದೆ. ಅಕಾಲ ಮರಣದಲ್ಲಿ ಕೊನೆಯ ಶ್ವಾಸ ಎನ್ನುವುದು ಇಲ್ಲದಂತೆ ಯಥಾ ಪ್ರಕಾರವಾಗಿ ಶ್ವಾಸ ಸೂಕ್ಷ್ಮಶರೀರದಲ್ಲಿ ಆಡುತ್ತದೆ. ಆದ್ದರಿಂದ ಎರಡನೆಯದರಲ್ಲಿ ಕೊನೆಯ ಶ್ವಾಸ ಇಲ್ಲವೆಂದು ಹೇಳಬಹುದು. ಇನ್ನು ಮೂರನೆಯದು ಶರೀರದಲ್ಲಿ ಶ್ವಾಸ ನಿಂತುಹೋಗಿ ಮನುಷ್ಯ ಮರಣಿಸಿದಂತೆ ಕಾಣಿಸಿದರೂ ಶ್ವಾಸ ಹೊರಗೆ ಹೋಗಲಿಲ್ಲ. ಜೀವಿಯಾಗಲಿ, ಆತ್ಮವಾಗಲಿ ಶರೀರವನ್ನು ಬಿಟ್ಟುಹೋಗಲಿಲ್ಲ. ತಾತ್ಕಾಲಿಕ ಮರಣದಲ್ಲಿ ಒಳಗೆ ಹೋದ ಶ್ವಾಸ ಉಸಿರಾಟ ಚೀಲಗಳಲ್ಲಿಯೆ ನಿಂತುಹೋಗುತ್ತದೆ. ಶ್ವಾಸ ಹೊರಗೆ ಬಾರದಂತೆ ನಿಂತುಹೋಗಿರುವುದರಿಂದ ಗುಂಡಿಗೆ ನಿಂತುಹೋಗುತ್ತದೆ. ಗುಂಡಿಗೆ ನಿಂತುಹೋಗುವುದರಿಂದ ರಕ್ತಪ್ರಸರಣ ಎಲ್ಲವೂ ನಿಂತುಹೋಗುತ್ತದೆ. ರಕ್ತಪ್ರಸರಣ ನಿಂತುಹೋಗುವುದರಿಂದ ಶರೀದಲ್ಲಿನ ನಾಡಿ ಒಡೆದುಕೊಳ್ಳುವುದಿಲ್ಲ, ಮೆದುಳಿನಿಂದ ಚೈತನ್ಯ ನಿಂತುಹೋಗುತ್ತದೆ. ಆದ್ದರಿಂದ ಶರೀರ ಚಲನೆ ಇಲ್ಲದಂತಾಗಿ, ಶ್ವಾಸ ಇಲ್ಲದ್ದಾಗಿ ಬಿದ್ದುಹೋಗುತ್ತದೆ. ಆಗ ಅದು ಹೊರಗಿನವರಿಗೆ ಮರಣದಂತೆ ಕಾಣಿಸಿದರೂ, ನಮ್ಮ ಲೆಕ್ಕದಲ್ಲಿ ಸಿದ್ಧಾಂತದ ಪ್ರಕಾರ ಮರಣವಲ್ಲ. ಏಕೆಂದರೆ ಶರೀರದಲ್ಲಿನ ಜೀವಿಯು ಹೊರಗೆ ಹೋಗಲಿಲ್ಲ. ಶರೀರದಲ್ಲಿನ ಶ್ವಾಸ ಒಳಗೆ ನಿಂತುಹೋಗಿದೆ ವಿನಃ ಹೊರಗೆ ಹೋಗಲಿಲ್ಲ, ಒಂದು ವೇಳೆ ಹೊರಗೆ ಹೋಗಿ ನಿಂತುಹೋಗಿದ್ದರೆ ಅದು ಆತನಿಗೆ ಕೊನೆಯ ಶ್ವಾಸ ಆಗಿರುತ್ತಿತ್ತು. ಆದರೆ ಶ್ವಾಸ ಒಳಗೆ ನಿಂತುಹೋಗಿರುವುದರಿಂದ ಅದು ಕೊನೆಯ ಶ್ವಾಸವೂ ಸಹ ಅಲ್ಲ. ಆದ್ದರಿಂದ ಅದು ಮರಣ ಅಲ್ಲವೆಂದು ಹೇಳಬಹುದು. ಅಂತಹ ಸಮಯದಲ್ಲಿ ಜೀವಿಯ ಸ್ಥಿತಿ ಹೇಗಿರುತ್ತದೆಂದು, ಅದನ್ನು ಏನೆಂದು ಹೇಳಬಹುದೆಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ಆ ಸಮಯದಲ್ಲಿ ಜೀವಿಯು ನಿದ್ರಾವಸ್ಥೆ ಸ್ಥಿತಿಯನ್ನು ಹೊಂದಿದ್ದಾನೆ. ಆದರೆ ಆ ಸಮಯದಲ್ಲಿ ಶರೀರದಲ್ಲಿ ಶ್ವಾಸ ಆಡುವುದಿಲ್ಲ, ಆದಕಾರಣ ಹೊರಗೆ ಅದು ಮರಣದಂತೆ ಕಾಣಿಸುತ್ತದೆ. ವೈದ್ಯರು ಸಹಿತವು ಅದನ್ನು ಮರಣವೇ ಎನ್ನುತ್ತಾರೆ. ಆದ್ದರಿಂದ ನಾವು ಅದಕ್ಕೆ ತಾತ್ಕಾಲಿಕ ಮರಣವೆಂದು ಹೆಸರು ಇಟ್ಟಿದ್ದೇವೆ.

ತಾತ್ಕಾಲಿಕ ಮರಣ ಕೆಲವರಿಗೆ ಕರ್ಮಾನುಸಾರವಾಗಿ ಬರುತ್ತಿರುತ್ತದೆ. ಈ ಮರಣವನ್ನು ಹೊಂದಿದವನು ಸ್ವಲ್ಪಸಮಯ ನಿದ್ರೆಮಾಡಿ ಎದ್ದಂತೆ ಕೆಲವು ಗಂಟೆಗಳಿಗಾಗಲಿ, ಕೆಲವು ದಿನಗಳಿಗಾಗಲಿ, ಕೆಲವು ತಿಂಗಳಿಗಾಗಲಿ ಪುನಃ ಮೇಲೇಳುತ್ತಾನೆ. ಆದರೆ ಆ ವಿಷಯ ಯಾರಿಗೂ ತಿಳಿದಿಲ್ಲ. ಆದ್ದರಿಂದ ತಾತ್ಕಾಲಿಕ ಮರಣವನ್ನು ಹೊಂದಿದವನನ್ನು ನಿಜವಾಗಲು ಸತ್ತುಹೋಗಿದ್ದಾನೆಂದು ಭ್ರಮಿಸಿ ಅವನನ್ನು ಮಣ್ಣುಮಾಡುವುದೋ, ಸುಟ್ಟುಹಾಕುವುದೋ ನಡೆಯುತ್ತಿದೆ. ಹಾಗೆ ಮಾಡುವುದರಿಂದ ಅವನನ್ನು ಹೊರಗೆ ಬಾರದಂತೆ ಹತ್ಯೆಮಾಡಿದಂತಾಗುತ್ತದೆ. ತಾತ್ಕಾಲಿಕ ಮರಣ ಹೊಂದಿದವನ ಶರೀರ ಆ ಜೀವಿಯು ಶರೀರದಲ್ಲಿ ಇರುವವರೆಗೂ ಕೆಟ್ಟುಹೋಗುವುದಿಲ್ಲ. ಶರೀರವು ತಣ್ಣಗಾಗಿ ಹೋದರು, ಶರೀರದ ಬಣ್ಣ ಬದಲಾಗಿಹೋದರೂ, ಶರೀರದಲ್ಲಿ ಯಾವ ಚಲನೆಯು ಇಲ್ಲದಿದ್ದರು ಆ ಶರೀರವು ಕೆಟ್ಟುಹೋಗುವುದಿಲ್ಲ. ತಾತ್ಕಾಲಿಕ ಮರಣವೆನ್ನುವುದು ಭೂಮಿ ಮೇಲೆ ಜೀವರಾಶಿ ಹುಟ್ಟಿದಾಗಿನಿಂದ ಇದೆ. ಪೂರ್ವಕಾಲದಲ್ಲಿ ಕೆಲವರು ಅದನ್ನು ಗುರ್ತಿಸಿದ್ದಾರೆ. ಕೆಲವರು ತಾತ್ಕಾಲಿಕ ಮರಣವನ್ನು ಹೊಂದಿ ಪುನಃ ಬದುಕಿದವರು ಸಹ ಇದ್ದಾರೆ. ಕೆಲವರಿಗೆ ತಾತ್ಕಾಲಿಕ ಮರಣ ತಿಳಿಯದಂತೆ ಬರುತ್ತಿದೆ. ಕೆಲವರೇನೋ ಅದನ್ನು ತಿಳಿದು ಹೊಂದುವವರು ಸಹ ಇದ್ದಾರೆ.



## ತಾತ್ಕಾಲಿಕ ಮರಣನಾ – ಬ್ರಹ್ಮಯೋಗನಾ?

ತಾತ್ಕಾಲಿಕ ಮರಣವನ್ನು ಚೆನ್ನಾಗಿ ವಿವರಿಸಿ ನೋಡಿದರೆ ಅದು ಭಗವದ್ಗೀತೆಯಲ್ಲಿ ಹೇಳಿದ ಬ್ರಹ್ಮಯೋಗದಂತಹದ್ದು. ಬ್ರಹ್ಮಯೋಗದಲ್ಲಿ ಬಾಹ್ಯ ಜ್ಞಾನೇಂದ್ರಿಯಗಳ ವಿಷಯಗಳೆಲ್ಲವೂ ನಿಂತುಹೋಗಿ, ಶ್ವಾಸ ತಟಸ್ಥವಾಗಿ, ಗುಂಡಿಗೆ ನಿಂತುಹೋಗಿರುತ್ತದೆ. ತಾತ್ಕಾಲಿಕ ಮರಣದಲ್ಲಿಯು ಇಂತಹ ಲಕ್ಷಣಗಳು ಶರೀರಕ್ಕಿರುತ್ತವೆ. ಮೇಲ್ನೋಟಕ್ಕೆ ಬ್ರಹ್ಮಯೋಗವು, ತಾತ್ಕಾಲಿಕ ಮರಣ ಎರಡು ಒಂದೇ ರೀತಿಯಲ್ಲಿದ್ದರೂ ಒಳಗೆ ಜೀವಿಯೂ ಮಾತ್ರ ಸ್ವಲ್ಪ ವ್ಯತ್ಯಾಸದಿಂದ

ಇರುತ್ತಾನೆ. ತಾತ್ಕಾಲಿಕ ಮರಣವನ್ನು ಹೊಂದಿದ ಜೀವಾತ್ಮ ಮರೆವಿನಿಂದ ಇರುತ್ತಾನೆ. ಬ್ರಹ್ಮಯೋಗವನ್ನು ಹೊಂದಿದ ಜೀವಿಯು ಎಚ್ಚರಿಕೆಯಲ್ಲಿರುತ್ತಾನೆ. **ಮರೆವು ಅಂದರೆ ನಿದ್ರೆ, ಎಚ್ಚರ ಎಂದರೆ ಯೋಗ.** ಬ್ರಹ್ಮಯೋಗವನ್ನು ಹೊಂದಿದವನಾಗಲಿ, ತಾತ್ಕಾಲಿಕ ಮರಣವನ್ನು ಹೊಂದಿದವನಾಗಲಿ ಹೊರಗೆ ಕಾಣಿಸುವುದಕ್ಕೆ ಒಂದೇ ಸ್ಥಿತಿಯಲ್ಲಿರುತ್ತಾರೆ. ಆದ್ದರಿಂದ ಯಾರು ಯೋಗದಲ್ಲಿ ಇದ್ದಾರೋ, ಯಾರು ಮರಣದಲ್ಲಿ ಇದ್ದಾರೋ ಹೇಳಲಾರೆವು. ಬ್ರಹ್ಮಯೋಗ ಹೊಂದಿದವನಾಗಲಿ, ತಾತ್ಕಾಲಿಕ ಮರಣ ಹೊಂದಿದವನಾಗಲೀ ಪುನಃ ಪ್ರಾಣದಿಂದ ಮೇಲೇಳುವವರೇ! ಆದ ಕಾರಣ ಇಬ್ಬರನ್ನು ಸೇರಿಸಿ ತಾತ್ಕಾಲಿಕ ಮರಣ ಹೊಂದಿದವರೆಂದರೂ ತಪ್ಪಿಲ್ಲ. ಬ್ರಹ್ಮಯೋಗವನ್ನು ಸಹ ಒಂದು ವಿಧವಾಗಿ ತಾತ್ಕಾಲಿಕ ಮರಣವೆಂದೇ ಹೇಳಬಹುದು. ಬ್ರಹ್ಮಯೋಗವೆಂಬ ತಾತ್ಕಾಲಿಕ ಮರಣವನ್ನು ಯೋಗಿ ಆದವನು ತಿಳಿದು ಹೊಂದುತ್ತಿದ್ದಾನೆ. ಯೋಗಿ ಅಲ್ಲದ ಸಾಧಾರಣ ಮನುಷ್ಯ ತನಗೆ ತಿಳಿಯದಂತೆ ತಾತ್ಕಾಲಿಕ ಮರಣವನ್ನು ಹೊಂದುತ್ತಿದ್ದಾನೆ. ತಾತ್ಕಾಲಿಕ ಮರಣದಂತಿರುವ ಬ್ರಹ್ಮಯೋಗವನ್ನು ಹೊಂದಿದ ಯೋಗಿ ಎಷ್ಟು ಕಾಲ ತಾನು ಯೋಗದಲ್ಲಿ ಇರಬೇಕೋ ನಿರ್ಣಯಿಸಿಕೊಂಡು ಬ್ರಹ್ಮಯೋಗವನ್ನು ಪ್ರಾರಂಭಿಸುತ್ತಾನೆ. ಹಾಗೆ ಒಂದು ಉದ್ದೇಶದಿಂದ ಪ್ರಾರಂಭಿಸಿದ ಯೋಗಿಗೆ ಸ್ವಲ್ಪ ಸಮಯ ವ್ಯತ್ಯಾಸದಿಂದ ಹೊರಗಿನ ಜ್ಞಾಪಕ ಬರುತ್ತದೆ. ಆದರೆ ತನಗೆ ತಿಳಿಯದಂತೆ ತಾತ್ಕಾಲಿಕ ಮರಣ ಹೊಂದಿದವನಿಗೆ ಒಂದು ನಿರ್ಣಯ ಎಂಬುವುದು ಇರುವುದಿಲ್ಲ, ಆದ್ದರಿಂದ ಆತನಿಗೆ ಹೊರಗಿನ ಜ್ಞಾಪಕ ಯಾವಾಗ ಬರುತ್ತದೋ ಹೇಳಲಾರೆವು. ಬ್ರಹ್ಮಯೋಗಿ ಯೋಗದಲ್ಲಿ ಕುಳಿತುಕೊಂಡಂತೆ, ಆತನು ಯೋಗವನ್ನು ಆಚರಿಸುವ ಯೋಗಿ ಆದಂತೆ, ಹೊರಗಿನವರಿಗೆ ತಿಳಿದಿರುವುದರಿಂದ ಬ್ರಹ್ಮಯೋಗಿ ಎಷ್ಟು ಕಾಲ ಯೋಗದಲ್ಲಿ ಕುಳಿತುಕೊಂಡರೂ ಫರವಾಗಿಲ್ಲ. ಹೊರಗಿನ ಮನುಷ್ಯರು ಆತನನ್ನು ಯೋಗಿಯಾಗಿಯೇ ನೋಡುತ್ತಾರೆ. ಬ್ರಹ್ಮಯೋಗಿ ಅಲ್ಲದಂತಹ ಸಾಧಾರಣ ಮನುಷ್ಯ ಒಂದುವೇಳೆ ತಾತ್ಕಾಲಿಕ ಮರಣವನ್ನು ಹೊಂದಿದರೆ, ಆತನ ಶರೀರದಲ್ಲಿ

ಶ್ವಾಸ ನಿಂತುಹೋಗಿರುವುದರಿಂದ, ಹೊರಗಿನ ಮನುಷ್ಯರು ಆತನನ್ನು ಮರಣಿಸಿದಂತೆ ಲೆಕ್ಕಿಸಿ, ಅವನಿಗೆ ಅಂತ್ಯಕ್ರಿಯೆಗಳು ಮಾಡುತ್ತಾರೆ.

ತಾತ್ಕಾಲಿಕ ಮರಣವನ್ನು ಹೊಂದಿದವನಿಗೆ, ಅವನ ಶರೀರದೊಳಗಿನ ಎಲ್ಲ ಕ್ರಿಯೆಗಳು ನಿಂತುಹೋಗುವುದಕ್ಕೆ ಆತನ ಮೆದುಳಿನಲ್ಲಿನ ಶಕ್ತಿ ಶರೀರವೆಲ್ಲವನ್ನು ಬಿಟ್ಟು ಮೆದುಳಿನಲ್ಲಿ ಮಾತ್ರವೆ ಕೇಂದ್ರೀಕೃತವಾಗುತ್ತದೆ. ಬದುಕಿರುವ ಸಾಧಾರಣ ಮನುಷ್ಯನಿಗೆ ಆತ್ಮಶಕ್ತಿ ಶರೀರವೆಲ್ಲಾ ವ್ಯಾಪಿಸಿರುತ್ತದೆ. ತಾತ್ಕಾಲಿಕ ಮರಣವನ್ನು ಹೊಂದಿದ ಮನುಷ್ಯನಿಗೆ ಆತ್ಮಶಕ್ತಿ ತಲೆಯಲ್ಲಿರುವ ಮೆದುಳಿನ ಮಧ್ಯಭಾಗದಲ್ಲಿ ನಿಂತುಹೋಗುತ್ತದೆ. ಸೂತ್ರದ ಪ್ರಕಾರ ಆತ್ಮ ಶರೀರದಲ್ಲಿ ಇರುವವರೆಗೂ ಜೀವಾತ್ಮವೂ ಸಹ ಶರೀರದಲ್ಲಿ ಇರುತ್ತದೆ. ಆತ್ಮ, ಜೀವಾತ್ಮ ಎರಡು ಜೋಡಿ ಆತ್ಮಗಳೆಂದು ಬಹಳಸಲ ಹೇಳಿದ್ದೇವೆ. ಬದುಕಿರುವ ಶರೀರದಲ್ಲಿ ಒಂದು ಆತ್ಮ ಇದೆ ಎಂದರೆ ಎರಡನೆ ಆತ್ಮವೂ ಸಹ ಇದ್ದೇ ಇರುತ್ತದೆ. ಆದ ಕಾರಣ ಮೆದುಳಿನ ಮಧ್ಯಭಾಗದಲ್ಲಿ ಆತ್ಮ ಶಕ್ತಿ ನಿಂತುಹೋಗುವುದರಿಂದ ಜೀವಾತ್ಮ ತನ್ನ ಸ್ಥಾನದಲ್ಲಿ ತಾನು ಇರುತ್ತಾನೆ. ಎಲ್ಲದಕ್ಕೂ ಶಕ್ತಿಯನ್ನು ಕೊಡುವ ಆತ್ಮ ತಾನು ಮಾತ್ರ ಶರೀರವೆಲ್ಲವೂ ಇದ್ದು ತನ್ನ ಶಕ್ತಿಯನ್ನು ಮೆದುಳಿನ ಮಧ್ಯದಲ್ಲಿ ನಿಲ್ಲಿಸಿ ಶರೀರದಲ್ಲಿನ ಯಾವ ಭಾಗಕ್ಕೂ ಶಕ್ತಿಯನ್ನು ಕೊಡದಿರುವುದರಿಂದ ಮನಸ್ಸು ಸಹ ಕೆಲಸಮಾಡುವುದಿಲ್ಲ. ಮನಸ್ಸು ಕೆಲಸ ಮಾಡದಿರುವುದರಿಂದ ಜೀವಾತ್ಮನಿಗೆ ಏನು ತಿಳಿಯದೆ ನಿದ್ರೆ ಸ್ಥಿತಿಯನ್ನು ಹೊಂದಿರುತ್ತಾನೆ. ತಾತ್ಕಾಲಿಕ ಮರಣವನ್ನು ಹೊಂದಿದ ಜೀವಿಯು ಪುನಃ ಹೊರಗಿನ ಜ್ಞಾಪಕ ಬರುವವರೆಗೂ ನಿದ್ರೆಯ ಸ್ಥಿತಿಯಲ್ಲಿಯೇ ಇರುತ್ತಾನೆ. ಬದುಕಿರುವವನಿಗೆ ನಿದ್ರೆ ಬಂದರೆ ಕೆಲವು ಗಂಟೆಗಳೆ ಇರುತ್ತದೆ. ಆದರೆ ತಾತ್ಕಾಲಿಕ ಮರಣದಲ್ಲಿನ ನಿದ್ರೆ ಕೆಲವು ದಿನಗಳು ಇಲ್ಲವೆ ಕೆಲವು ತಿಂಗಳು ಇರಬಹುದು. ಇಷ್ಟು ದಿನಗಳು ಆ ವಿಧವಾದ ನಿದ್ರೆ ಇರುತ್ತದೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ತಾತ್ಕಾಲಿಕ ಮರಣ ಹೊಂದಿದವನು ಎಷ್ಟು ದಿನಗಳು ಆ ಸ್ಥಿತಿಯಲ್ಲಿರುವನೋ ಅವನ ಆತ್ಮದ ಮೇಲೆ ಆಧಾರ ವಾಗಿರುತ್ತದೆ. ಆತನ ಆತ್ಮ ನಿರ್ಣಯವನ್ನನುಸರಿಸಿ ತಾತ್ಕಾಲಿಕ ಮರಣದ ಕಾಲವಿರುತ್ತದೆ.

ಮೆದುಳಿನ ಮಧ್ಯಭಾಗದಲ್ಲಿ ನಾಲ್ಕು ಚಕ್ರಗಳ ಸಮುದಾಯಕ್ಕೆ ಆತ್ಮ ಆಧಾರವಾಗಿದೆ. ನಾಲ್ಕುಚಕ್ರಗಳು ಆಗೋಚರವಾದವು. ಅವುಗಳಿಗೆ ಆಧಾರವಾದ ಆತ್ಮವೂ ಸಹ ಅಗೋಚರವಾದುದೆ. ನಾಲ್ಕುಚಕ್ರಗಳಲ್ಲಿ ಕೆಳಗಿನ ಚಕ್ರದಲ್ಲಿ ಜೀವಾತ್ಮ ಇರುತ್ತಾನೆ. ಈ ನಾಲ್ಕುಚಕ್ರಗಳು ತಲೆ ಭಾಗದಲ್ಲಿ ಇರುವವರೆಗು ಜೀವಿಯು ಆ ಶರೀರವನ್ನು ಬಿಟ್ಟುಹೋಗುವುದಕ್ಕೆ ಆಗುವುದಿಲ್ಲ. ತಾತ್ಕಾಲಿಕ ಮರಣವನ್ನು ಹೊಂದಿದ ಮನುಷ್ಯನಿಗೆ ಆತ್ಮಶಕ್ತಿ ಶರೀರದಿಂದ ಸಂಕುಚಿತವಾಗಿ ನಾಲ್ಕುಚಕ್ರಗಳ ಹತ್ತಿರ ಮಾತ್ರ ನಿಂತುಹೋಗುತ್ತದೆ. ಆತ್ಮಶಕ್ತಿ ಶರೀರವೆಲ್ಲವೂ ಇಲ್ಲದಂತೆ ನಾಲ್ಕುಚಕ್ರಗಳ ಮಧ್ಯದಲ್ಲಿ ನಿಂತುಹೋದಾಗ ನಾಲ್ಕು ಚಕ್ರಗಳಲ್ಲಿ ಕೆಳಗೆ ಎರಡು ಚಕ್ರಗಳಾದ ಗುಣ, ಕರ್ಮಚಕ್ರಗಳು ಸಹ ಚಲಿಸದಂತೆ ನಿಂತುಹೋಗುತ್ತವೆ. ಆದ್ದರಿಂದ ಆ ಶರೀರದಲ್ಲಿನ ಗುಣಗಳಾಗಲಿ, ಕರ್ಮವಾಗಲಿ ಆಚರಣೆಗೆ ಬಾರದಂತೆ ನಿಂತುಹೋಗುತ್ತದೆ. ತಾತ್ಕಾಲಿಕ ಮರಣವನ್ನು ಹೊಂದಿದ ಜೀವಿಯು ಯಾವ ಗುಣವನ್ನು ಹೊಂದದೆ, ಯಾವ ಕರ್ಮವನ್ನು ಅನುಭವಿಸದೆ ನಿದ್ರೆಯ ಸ್ಥಿತಿಯಲ್ಲಿ ಇರುತ್ತಾನೆ. ಇದೇ ಪರಿಸ್ಥಿತಿ ಬ್ರಹ್ಮಯೋಗದಲ್ಲಿಯೂ ಸಹ ಉಂಟಾಗುತ್ತಿದೆ. ಆದರೆ ಅಲ್ಲಿ ಮನಸ್ಸು ಎಚ್ಚರಿಕೆಯಲ್ಲಿದೆ. ತಾತ್ಕಾಲಿಕ ಮರಣದಲ್ಲಿ ಮನಸ್ಸು ಇಲ್ಲದಿರುವುದರಿಂದ ಆ ಸ್ಥಿತಿಯನ್ನು ನಿದ್ರಾಸ್ಥಿತಿ ಎಂದು ಹೇಳಬಹುದು. ನಾಲ್ಕು ಚಕ್ರಗಳ ಸಮುದಾಯವನ್ನು ನಂತರ ಚಿತ್ರದಲ್ಲಿ ನೋಡಬಹುದು.

ಕಾಲ ಮರಣದಲ್ಲಿ ಕೊನೆಯದಾಗಿ ಶ್ವಾಸ ನಿಂತುಹೋದಾಗ ಶರೀರದಿಂದ ಹೊರಗೆ ಹೋಗುವುದು ಈ ನಾಲ್ಕುಚಕ್ರಗಳೇ ಎಂದು ತಿಳಿಯಬೇಕು. ನಾಲ್ಕು ಚಕ್ರಗಳಿಗೂ ಆಧಾರವಾಗಿರುವ ಆತ್ಮವು, ಕೆಳಗಿನ ಚಕ್ರದಲ್ಲಿರುವ ಜೀವಾತ್ಮವು, ಕೆಳಗಿನ ಚಕ್ರದಲ್ಲಿಯೇ ಇರುವ ಗುಣಗಳು, ಅದರ ಮೇಲಿನ ಚಕ್ರದಲ್ಲಿನ ಕರ್ಮಗಳೆಲ್ಲವೂ ಮರಣದಲ್ಲಿ ಹೊರಗೆಹೋಗಿ ಮತ್ತೊಂದು ಶರೀರವನ್ನು ಸೇರಿ ಜೀವಿಗೆ ಜನ್ಮವನ್ನು ಹೊಂದುವಂತೆ ಮಾಡುತ್ತವೆ. ಆದರೆ ತಾತ್ಕಾಲಿಕ ಮರಣದಲ್ಲಿ ಹಾಗೆ ನಡೆಯುವುದಿಲ್ಲ. ತಾತ್ಕಾಲಿಕ ಮರಣ ಸಾಧಾರಣ ಕಾಲಮರಣದಂತೆ ಕಾಣಿಸಿದರೂ ಅದು ಬ್ರಹ್ಮಯೋಗದಂತೆ ಇರುತ್ತದೆಂದು




**ಬ್ರಹ್ಮ, ಕಾಲ, ಕರ್ಮ, ಗುಣಚಕ್ರ ಚಿತ್ರದಲ್ಲಿ**

ಹೇಳಬಹುದು. ಯೋಗದಂತಿರುವ ತಾತ್ಕಾಲಿಕ ಮರಣದಲ್ಲಿ ಮನುಷ್ಯನಿಗೆ ಕರ್ಮ ಹೋಗುವುದು ಇಲ್ಲ, ಹಾಗೆ ಕರ್ಮಬರುವುದು ಇಲ್ಲ. ಬ್ರಹ್ಮಯೋಗ ದಲ್ಲಾಗಲೀ, ತಾತ್ಕಾಲಿಕ ಮರಣದಲ್ಲಾಗಲೀ ಹೊರಗೆ ನಡೆಯುವ ಪ್ರಕ್ರಿಯೆ ಏನು ಕಾಣಿಸುವುದಿಲ್ಲ.



# ತಾತ್ಕಾಲಿಕ ಮರಣ ಜೀವರಾಶಿಗಳಿಗೆಲ್ಲ ಇದೆಯಾ?

ನಾವು ಇಲ್ಲಿಯವರೆಗೂ ಹೇಳಿದ ತಾತ್ಕಾಲಿಕ ಮರಣ ಕೆಲವರಿಗೆ ಹೊಸದಾಗಿ, ಕೆಲವರಿಗೆ ವಿಚಿತ್ರವಾಗಿ ಕಾಣಿಸಿದರೂ, ಈ ಮರಣವನ್ನು ಕೆಲವರು ಮನುಷ್ಯರೆ ಅಲ್ಲದೆ ಎಷ್ಟೋ ಜೀವರಾಶಿಗಳು ಸಹ ಹೊಂದಿವೆ ಎಂದು ತಿಳಿಯುತ್ತದೆ. ಕೆಲವು ಪ್ರದೇಶಗಳಲ್ಲಿ ಚಿಕ್ಕ ಚಿಕ್ಕ ಜೀವರಾಶಿಗಳು ತಾತ್ಕಾಲಿಕ ಮರಣವನ್ನು ಒಂದೇಸಾರಿ ಹೊಂದುವುದಲ್ಲದೆ, ಒಂದಕ್ಕಿಂತ ಹೆಚ್ಚುಸಲ ಹೊಂದಿರುವವು ಸಹ ಇವೆ. ತಾತ್ಕಾಲಿಕ ಮರಣವನ್ನು ಹೊಂದಿದವುಗಳಲ್ಲಿ

ಕಪ್ಪೆಗಳು, ಚಿಕ್ಕ ಚಿಕ್ಕ ಮಿಡತೆ ಜಾತಿಗಳು ಎಷ್ಟೋ ಇವೆಯೆಂದು ಹೇಳಬಹುದು. ಕೆಲವು ಕಪ್ಪೆಗಳನ್ನು ಭೂಮಿಯೊಳಗೆ ಸಮಾಧಿ ಮಾಡಿದಂತೆ ಭೂಮಿಯನ್ನು ಅಗೆದಾಗ ಕೆಲವರು ನೋಡಿರುತ್ತಾರೆ. ಹತ್ತು, ಹದಿನೈದು, ಇಪ್ಪತ್ತು ಅಡಿಗಳೊಳಗೂ ಸಹ ಕಪ್ಪೆಗೂಡನ್ನು ನೋಡುವುದು ನಡೆದಿದೆ. ಇಪ್ಪತ್ತು ಇಲ್ಲವೆ ಮೂವತ್ತು ಅಡಿಗಳ ಆಳದಲ್ಲಿ ಬಗೆದಾಗ ಹೊರಬಿದ್ದ ಕಪ್ಪೆಯನ್ನು ಕುರಿತು ಅದು ಅಷ್ಟು ಒಳಗೆ ಹೇಗೆ ಬದುಕಿದೆ? ಎಷ್ಟು ಕಾಲದಿಂದ ಇದೆ? ಅಲ್ಲಿಯವರೆಗು ಅದಕ್ಕೆ ಆಹಾರ ಹೇಗೆ ಲಭಿಸಿದೆ? ಎನ್ನುವ ಪ್ರಶ್ನೆಗಳು ಕೇಳಿದರೆ ಎಷ್ಟೋ ವಿಜ್ಞಾನವಿರುವ ಶಾಸ್ತ್ರಜ್ಞರು ಸಹ ಅದಕ್ಕೆ ಉತ್ತರ ಹೇಳಲಾರದೆ ಇವು ವಿವರಿಸಲಾರದ ರಹಸ್ಯಗಳು **(UN EXPLAINED MYSTERIES)** ಎಂದು ಬಿಟ್ಟುಹಾಕಿದ್ದಾರೆ. ಅದನ್ನು ಕುರಿತು ನಾವು ಏನು ಹೇಳುತ್ತಿದ್ದೇವೆಂದರೆ, ಭೂಮಿ ಒಳಗಿನಿಂದ ಹೊರಬಿದ್ದ ಕಪ್ಪೆ ಭೂಮಿಯಲ್ಲಿ ಅಲ್ಲಿಯವರೆಗೂ ತಾತ್ಕಾಲಿಕ ಮರಣ ಹೊಂದಿದೆ ಎಂದು, ಆ ಕಪ್ಪೆ ಯಾವುದೋ ಒಂದು ಕಾಲದಲ್ಲಿ, ಯಾವುದೋ ಒಂದು ಸಂಘಟನೆಯಲ್ಲಿ ಭೂಮಿಯಲ್ಲಿ ಮುಚ್ಚಿಕೊಂಡು ಹೋಗಿದೆ ಎಂದು, ಅದು ಹೊರಬಿದ್ದಾಗ ಪುನಃ ಎಚ್ಚರಿಕೆ ಬಂದು ಕದಲುತ್ತಿದೆ ಎಂದು, ಆ ವಿಧವಾಗಿ ಕೆಲವು ಸಾವಿರ, ಕೆಲವು ಲಕ್ಷಗಳ ವರ್ಷಗಳಿಂದ ಅದು ಹಾಗೇ ಇದೆಯೆಂದು ಹೇಳುತ್ತಿದ್ದೇವೆ. ಹಾಗೆ ಇರುವುದಕ್ಕೆ ಸಾಧ್ಯನಾ? ಎಂದು ಕೆಲವರಿಗೆ ಅನುಮಾನ ಬರಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ!

ತಾತ್ಕಾಲಿಕ ಮರಣವನ್ನು ಹೊಂದಿದ ಯಾವ ಜೀವರಾಶಿಗಾಗಲಿ, ಮಾನವನಿಗಾಗಲಿ ಇಷ್ಟುಕಾಲವೆಂದು ನಿರ್ಣಯ ಇರುವುದಿಲ್ಲವೆಂದು ಮೊದಲೆ ಹೇಳಿದ್ದೇವೆ. ಕಪ್ಪೆ ವಿಷಯಕ್ಕೆ ಬಂದರೆ ಕಪ್ಪೆ ತಲೆಯಲ್ಲಿನ ನಾಲ್ಕು ಚಕ್ರಗಳನ್ನು ನಡೆಸುವ ಆತ್ಮ, ಕಪ್ಪೆ ಮಣ್ಣಿನಲ್ಲಿ ಹೂತುಹೋಗಿರುವಾಗ ಅದನ್ನು ತಾತ್ಕಾಲಿಕ ಮರಣವನ್ನು ಹೊಂದುವಂತೆ ಮಾಡಿದೆ. ಮಣ್ಣಿನಲ್ಲಿ ಸಿಲುಕಿಕೊಂಡು ಹೋದ ಕಪ್ಪೆ ಮೊದಲು ತಾತ್ಕಾಲಿಕ ಮರಣವನ್ನು ಹೊಂದುವುದಕ್ಕಿಂತ ಮೊದಲೆ ತನ್ನ ಸುತ್ತಲೂ ಇರುವ ಮಣ್ಣನ್ನು ತನ್ನ ನಾಲಿಗೆಯಿಂದ ನೆಕ್ಕುತ್ತಾ, ಸ್ವಲ್ಪ ಮಣ್ಣನ್ನು

ತಿಂದು, ತನ್ನ ಸುತ್ತಲೂ ಏನು ಇಲ್ಲದಂತೆ, ತಾನು ನಲುಗಿ ಹೋಗದಂತೆ ಸಣ್ಣ ಗೂಡಿನಂತೆ ಮಾಡಿಕೊಳ್ಳುತ್ತದೆ. ತನ್ನ ಸುತ್ತಲೂ ಸ್ವಲ್ಪ ಸ್ಥಳವಿರುವಂತೆ ಮಾಡಿಕೊಂಡು ನಿಂತುಹೋಗುತ್ತದೆ. ಹಾಗೆ ನಿಂತುಹೋದ ನಂತರ ಅದು ತಾತ್ಕಾಲಿಕ ಮರಣವನ್ನು ಹೊಂದುತ್ತದೆ. ನಂತರ ಅದು ನಿದ್ರೆ ಸ್ಥಿತಿಯನ್ನೇ ಹೊಂದಿದೆ, ಆದರೆ ಬದುಕಿದ ಸ್ಥಿತಿಯನ್ನು ಅಲ್ಲ. ಚಲನೆ ಇಲ್ಲದಂತೆ ನಿಂತುಹೋದ ಕಪ್ಪೆ ಶರೀರದಲ್ಲಿನ ಆತ್ಮ, ಆ ಶರೀರದಲ್ಲಿನ ಕೆಲಸಗಳೆಲ್ಲವನ್ನು ನಿಲ್ಲಿಸುವುದರಿಂದ, ಆ ಕಪ್ಪೆ ಹಾಗೆಯೇ ಬೆಳೆಯದಂತೆ ನಿಂತುಹೋಗಿದೆ. ಮಣ್ಣಿನಲ್ಲಿ ಹೂತುಹೋಗಿರುವ ದಿನ ಕಪ್ಪೆ ಎಷ್ಟು ದಪ್ಪ (ಪರಿಮಾಣ) ಇದೆಯೋ, ಕೆಲವು ಸಾವಿರ ವರ್ಷಗಳ ನಂತರ ಹೊರಬಿದ್ದಾಗಲೂ ಸಹ ಅದೇ ದಪ್ಪ (ಸೈಜು) ದಲ್ಲಿ ಇರುತ್ತದೆ. ಆ ದಿನ ಎಷ್ಟು ವಯಸ್ಸಿದೆಯೋ, ಅಷ್ಟೇ ವಯಸ್ಸು ಹೊರಬಿದ್ದ ದಿನವಿರುತ್ತದೆ. ಮಣ್ಣಿನಲ್ಲಿ ಹೂತುಹೋಗಿರುವ ದಿನ ಯಾವ ಜಾತಿಯ ಕಪ್ಪೆಯಾಗಿರುತ್ತದೆಯೋ, ಹೊರಬಿದ್ದ ದಿನವೂ ಸಹ ಅದೇ ಜಾತಿ ಕಪ್ಪೆಯಾಗಿರುತ್ತದೆ. ಕೆಲವು ಕಡೆ ಪೂರ್ವಕಾಲದಿಂದ ಪ್ರಸ್ತುತ ಕಾಲದಲ್ಲಿ ಆ ಪ್ರಾಂತದಲ್ಲಿ ಇಲ್ಲದ ಜಾತಿಕಪ್ಪೆಗಳು ಹೊರಬಿದ್ದಿವೆ, ಅದಕ್ಕೆ ಕಾರಣ ಆ ಜಾತಿ ಈಗ ಇಲ್ಲದಿದ್ದರೂ ಪೂರ್ವಕಾಲದಲ್ಲಿ ಇತ್ತೆಂದು ಅರ್ಥವಾಗುತ್ತಿದೆ. ಹಾಗೆಯೇ ಬಣ್ಣದಲ್ಲಿ ವ್ಯತ್ಯಾಸ ಇರುವವು, ಆಕಾರದಲ್ಲಿ ವ್ಯತ್ಯಾಸ ಇರುವವು ಬಗೆಯುವಾಗ ಹೊರಬೀಳುವುದು ನೋಡಿದ್ದೇವೆ. ಅದರಿಂದ ಪ್ರಸ್ತುತ ಕಾಲದಲ್ಲಿ ಇಲ್ಲದ ಜಾತಿ, ಪೂರ್ವಕಾಲದಲ್ಲಿ ಯಾವಾಗಲೋ ಇದೆಯೆಂದು, ಆ ದಿನದಿಂದ ಇರುವ ಕಪ್ಪೆ ಈಗ ಹೊರಬಿದ್ದಿದೆ ಎಂದು ಅರ್ಥವಾಗುತ್ತದೆ.

ಶ್ವಾಸಕೋಶ ಕೆಲಸ ಮಾಡದಿದ್ದರು, ಗುಂಡಿಗೆ ಬಡೆದುಕೊಳ್ಳದಿದ್ದರು, ಒಂದು ಜೀವಿ ಶರೀರದಲ್ಲಿ ಎಷ್ಟುಕಾಲವಾದರು ಸಜೀವವಾಗಿ ಇರುತ್ತದಾ? ಎಂಬ ಪ್ರಶ್ನೆ ಪ್ರತಿ ಒಬ್ಬರಿಗೂ ಬರುತ್ತದೆ. ಅದಕ್ಕೆ ಸಮಾಧಾನ ಹೀಗೆ ಇದೆ. ಈ ವಿಷಯ ಭೌತಿಕಶಾಸ್ತ್ರದ ಮೂಲಕ ತಿಳಿಯುವುದಿಲ್ಲ. ಭೌತಿಕಶಾಸ್ತ್ರ ಕಾಣಿಸುವ ಭೌತಿಕ ಶರೀರಕ್ಕೆ ಸಂಬಂಧಿಸಿರುವುದು ಮಾತ್ರವೆ. ಆದ್ದರಿಂದ ಭೌತಿಕಶಾಸ್ತ್ರಜ್ಞರು

ಈ ವಿಷಯವನ್ನು ಯಾವಕಡೆ ನಿರ್ಣಯಿಸಲಾರರು. ತಾತ್ಕಾಲಿಕ ಮರಣ ಭೌತಿಕಶಾಸ್ತ್ರಕ್ಕೆ ಅರ್ಥವಾಗದ ವಿಷಯವಾಗಿದೆ. ಆದ್ದರಿಂದ ಈ ವಿಷಯವನ್ನು ವಿವರಿಸಲಾರದ ರಹಸ್ಯ ಎಂದಿದ್ದಾರೆ. ಪ್ರತಿ ವಿಷಯಕ್ಕೂ ಶಾಸ್ತ್ರಬದ್ಧತೆ ಇರಬೇಕು. ಆಗ ಅದರ ವಾಸ್ತವಿಕತೆ ತಿಳಿಯುತ್ತದೆ. ಹೊರಗೆ ಮರಣಿಸಿ ಎಷ್ಟುಕಾಲವಾದರು, ಜೀವಿಸುವ ವಿಷಯದಲ್ಲಿನ ವಾಸ್ತವವು ತಿಳಿಯಬೇಕೆಂದರೆ ಬ್ರಹ್ಮವಿದ್ಯಾಶಾಸ್ತ್ರವನ್ನು ನೋಡಬೇಕಾಗಿದೆ. ಬ್ರಹ್ಮವಿದ್ಯಾಶಾಸ್ತ್ರ ಆರು ಶಾಸ್ತ್ರಗಳಲ್ಲಿಯು ದೊಡ್ಡದು. ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ಶರೀರದಲ್ಲಿನ ಆತ್ಮಕ್ಕೆ ಶರೀರದ ಮೇಲೆ ಸರ್ವ ಅಧಿಕಾರ ಇರುತ್ತದೆ. ಜೀವಾತ್ಮ ಮಾತ್ರ ಶರೀರದಲ್ಲಿ ಯಾವ ಹಕ್ಕು ಇಲ್ಲದವ ನಾಗಿದ್ದಾನೆ. ಆತ್ಮ ಒಂದೇ ಈಕಡೆ ಶರೀರವನ್ನು, ಆಕಡೆ ಜೀವಾತ್ಮವನ್ನು ಆಜ್ಞಾಪಿಸಿ ನಡೆಸುತ್ತದೆ. ಕಪ್ಪೆ ಶರೀರದಲ್ಲಿಯೂ ಸಹ ಆತ್ಮ ಇದೆ. ಕಪ್ಪೆ ಶರೀರದ ಮೇಲೆ ಅಧಿಕಾರವಿರುವ ಆತ್ಮ, ನಾಲ್ಕುಚಕ್ರಗಳನ್ನು ನಿಲ್ಲಿಸಿ ಅದರ ಜೀವನ ವ್ಯವಸ್ಥೆಯನ್ನು ನಿಲ್ಲಿಸಿದೆ. ಕಪ್ಪೆ ಶರೀರದಲ್ಲಿನ ಜೀವಿಯನ್ನು ನಾಲ್ಕನೆಚಕ್ರವಾದ ಗುಣಚಕ್ರದಲ್ಲಿ ನಿಲ್ಲಿಸಿದೆ. ಕಪ್ಪೆ ಶರೀರದಲ್ಲಿನ ಬಿಸಿಯನ್ನು, ಚಲನೆಗಳನ್ನು ಎಲ್ಲವನ್ನೂ ತನ್ನಲ್ಲಿ ಅಡಗಿಸಿದೆ. ಅಗತ್ಯಬಂದಾಗ ಶರೀರಕ್ಕೆ ಚಲನೆಗಳನ್ನು, ಬಿಸಿಯನ್ನು ಆತ್ಮವೇ ಕೊಡುತ್ತದೆ. ಆತ್ಮ ನಾಲ್ಕುಚಕ್ರಗಳನ್ನು ಚಲಿಸದಂತೆ ಎಷ್ಟುಕಾಲವಾದರೂ ನಿಲ್ಲಿಸಬಲ್ಲದು. ನಂತರ ಯಾವಾಗ ಚಕ್ರಗಳು ಚಲಿಸುವಂತೆ ಮಾಡಿದರೆ ಆಗ ಬ್ರಹ್ಮನಾಡಿ (ಬೆನ್ನುಮೂಳೆ) ಮೂಲಕ ಚೈತನ್ಯವು ಶರೀರದೊಳಗೆ ಹರಡಿ ಶರೀರವು ಚಲಿಸುತ್ತದೆ. ಆಗಲೇ ಶರೀರದೊಳಗೆ ಬಿಸಿ ಸಹ ಹರಡುತ್ತದೆ. ಅಲ್ಲಿಯವರೆಗೂ ನಿಂತುಹೋದ ರಕ್ತಪ್ರಸರಣ ಪುನಃ ಪ್ರಾರಂಭವಾಗಿ ಗುಂಡಿಗೆ ಬಡಿದುಕೊಳ್ಳುತ್ತದೆ. ಆಗಲೆ ಜೀವಿಯೂ ನಿದ್ರೆಯಿಂದ ಎದ್ದಂತೆ ಜಾಗ್ರತಾವಸ್ಥೆಯೊಳಗೆ ಬರುತ್ತದೆ. ಅಲ್ಲಿಯವರೆಗೂ ಎಷ್ಟುಕಾಲ ನಡೆದಿರುವುದು ಜೀವಿಗಾಗಲಿ, ಮನಸ್ಸಿಗಾಗಲಿ, ಬುದ್ಧಿಗಾಗಲಿ ತಿಳಿದಿಲ್ಲ. ನಿದ್ರೆಹೋಗಿ ಎದ್ದಂತೆ ಜೀವಿಗೆ ತಿಳಿಯುತ್ತದೆ, ಆದರೆ ಕಳೆದ ಕಾಲ ಎಷ್ಟು ಎಂದು ತಿಳಿಯುವುದಿಲ್ಲ. ತಾನು ಮರಣವನ್ನು ಹೊಂದಿ ಎದ್ದಂತೆ ಯಾವ ಅನುಭೂತಿ ಇರುವುದಿಲ್ಲ. ಈ ವಿಧವಾಗಿ ಬ್ರಹ್ಮವಿದ್ಯಾಶಾಸ್ತ್ರ ಪ್ರಮಾಣವಾಗಿ ನಮಗೆ ತಿಳಿಯದ ತಾತ್ಕಾಲಿಕ ಮರಣವಿದೆಯೆಂದು ತಿಳಿಯುತ್ತಿದೆ. ಇದನ್ನು ಶಾಸ್ತ್ರಬದ್ಧತೆ ಇಲ್ಲದ ವಿಷಯವಾಗಿ ಯಾರು ಲೆಕ್ಕಿಸಬಾರದು.



26

# ಯೇಸು ಮರಣ ಎಂತಹದ್ದೋ ಗೊತ್ತಾ?

ಕ್ರೈಸ್ತವ ಮತಕರ್ತ ಯೇಸುಪ್ರಭುವು ಸಿಲುಬೆಯ ಮೇಲೆ ಮರಣಿಸಿದ್ದಾನೆಂದು ಎಲ್ಲರೂ ಹೇಳುವಾಗ ಕೇಳಿದ್ದೇವೆ. ಆದರೆ ನಾನು ಕೇಳುವುದೇನೆಂದರೆ! ಆತನು ಕಾಲಮರಣವನ್ನು ಹೊಂದಿದ್ದಾನಾ? ಅಕಾಲ ಮರಣವನ್ನು ಹೊಂದಿದ್ದಾನಾ? ತಾತ್ಕಾಲಿಕ ಮರಣವನ್ನು ಹೊಂದಿದ್ದಾನಾ? ಎನ್ನುತ್ತಿದ್ದೇನೆ. ಯೇಸುಪ್ರಭು ಮರಣಕ್ಕೆ ಮೂರು ಪ್ರಶ್ನೆಗಳಿವೆ ಎಂದು ಬಹುಶಃ ಯಾರು ಅಂದುಕೊಂಡಿರುವುದಿಲ್ಲ. ಅವರ ಮತದಲ್ಲಿನ ಯಾವ ಬೋಧಕನಾಗಲಿ ಆತನ ಮರಣವನ್ನು ಕುರಿತು ಯೋಚಿಸಿರುವುದಿಲ್ಲ ಅಂದುಕೊಳ್ಳುತ್ತೇನೆ. ಆದರೆ ನಾವು ಹೇಳುವುದೇನೆಂದರೆ! ಯೇಸುಪ್ರಭುವಿನದು ಕಾಲ ಮರಣವಲ್ಲ, ಅಕಾಲ ಮರಣವೂ ಅಲ್ಲ. ಆತನು ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆ. ಏಸು ತಾನು ಮರಣಿಸಿದಂತೆ ಅಲ್ಲಿರುವವರೆಲ್ಲರಿಗೂ ತಿಳಿಯುವಂತೆ ಸತ್ತುಹೋಗಿದ್ದಾನೆ. ಏಸು ಸತ್ತುಹೋದಂತೆ ನಿರ್ಧರಿಸುವುದಕ್ಕೆ, ಒಬ್ಬ ಸೈನಿಕನು ಸಿಲುಬೆಯ ಮೇಲೆ ತಲೆಬಗ್ಗಿಸಿ ಸತ್ತುಹೋದ ಪ್ರಭುವಿನ ಹೊಟ್ಟೆಗೆ ಈಟಿಯಿಂದ ಇರಿದನು, ಹಾಗೆ ಇರಿದಾಗ ಯೇಸು ಸ್ವಲ್ಪವೂ ಸಹ ಚಲನೆ ಇಲ್ಲದವನಾಗಿರುವಂತೆ, ಆತನು ಮರಣಿಸಿದಂತೆ ನಿರ್ಧಾರವಾಗಿದೆ. ಆ ವಿಧವಾಗಿ ಆತನು ಸತ್ತುಹೋಗಿದ್ದಾನೆಂದು ತಿಳಿದ ನಂತರ ಆತನ ಶವವನ್ನು ಇತರರಿಗೆ ಒಪ್ಪಿಸಿದರು. ಅಲ್ಲಿ ನಡೆದ ವಿಚಿತ್ರ ಏನೆಂದರೆ, ಆತನು ಮರಣಿಸಿದ್ದಾನೆನ್ನುವುದಕ್ಕೆ ನಿರೂಪಣೆ ದೊರೆತಿದೆ. ನಮ್ಮ ಮಾತಿನ ಪ್ರಕಾರ ಆತನು ಎಲ್ಲರಂತೆ ಸತ್ತುಹೋಗಿಲ್ಲ ಎನ್ನುವುದಕ್ಕೂ ನಿರೂಪಣೆ ದೊರಕಿದೆ. ಆತನು ಮರಣಿಸಿದ್ದಾನೆನ್ನುವುದಕ್ಕೆ ಈಟಿಯಿಂದ ಇರಿದಾಗ ಆತನಲ್ಲಿ ಚಲನೆಯಿಲ್ಲ. ಬದುಕಿದ್ದರೆ ಸ್ವಲ್ಪವಾದರೂ ಕದಲುತ್ತಿದ್ದನು ಇಲ್ಲವೆ ಮೂಲುಗುತ್ತಿದ್ದನು, ಆದರೆ ಹಾಗೆ ನಡೆಯಲಿಲ್ಲ, ಆದ ಕಾರಣ ಹೊರಗೆ ಪ್ರಜೆಗಳ ಲೆಕ್ಕದಲ್ಲಿ ಆತನು ನಿಜವಾಗಲು ಸತ್ತುಹೋದಂತೆ. ಹೊರಗಿನ ಪ್ರಜೆಗಳ ಲೆಕ್ಕದ ಪ್ರಕಾರ ಆತನು ಮರಣಿಸಲಿಲ್ಲ ಎನ್ನುವುದಕ್ಕೂ ಸಹ ಆಧಾರ ಇದೆ. ಮರಣಿಸಿದ ವ್ಯಕ್ತಿ ಶರೀರದಲ್ಲಿ ರಕ್ತ ಗಡ್ಡೆಕಟ್ಟಿಹೋಗುತ್ತದೆ. ಆದರೆ ಒಬ್ಬ ಸೈನಿಕನು ಈಟಿಯಿಂದ ಆತನ ಹೊಟ್ಟೆಯ ಪಕ್ಕದಲ್ಲಿ ಇರಿದಾಗ ಗಾಯದಿಂದ ರಕ್ತ

ಸೋರಿದಂತೆ ತಿಳಿದಿದೆ. ಹಾಗೆ ರಕ್ತ ನೀರಾಗಿ ಸೋರಿದೆ ಎಂದರೆ ಹೊರಗೆ ಪ್ರಜೆಗಳ ದೃಷ್ಟಿಯಲ್ಲಿ ಮರಣಿಸಲಿಲ್ಲವೆಂದು ಅನುಮಾನ ಬಾರದೆ ಇರುವುದಿಲ್ಲ. ಆ ವಿಧವಾಗಿ ಯೇಸು ಪ್ರಭುವಿನ ಮರಣದ ಬಗ್ಗೆ ಪ್ರಜೆಗಳಲ್ಲಿ, ಆತನು ಮರಣಿಸಿದ್ದಾನೆಂದು, ಮರಣಿಸಲಿಲ್ಲವೆಂದು ಎರಡು ವಿಧಗಳ ಅನುಮಾನಗಳು ಬರುವಂತೆ ನಡೆದಿದೆ. ವಾಸ್ತವಕ್ಕೆ ಅಲ್ಲಿ ಏನು ನಡೆದಿರುವುದು ಯೋಚಿಸಿದರೆ ಹೀಗೆ ತಿಳಿಯುತ್ತದೆ.

ಯೇಸುಪ್ರಭು ಮರಣಿಸುವಾಗ (ಯೋಹಾನ್ ಸುವಾರ್ತೆ 19 ಅಧ್ಯಾಯ 30ನೇ ವಚನದಲ್ಲಿ) **"ಸಮಾಪ್ತವಾಗಿದೆ ಎಂದು ಹೇಳಿ ತಲೆಬಗ್ಗಿಸಿ ಆತ್ಮವನ್ನು ಒಪ್ಪಿಸಿದನು"** ಎಂದು ಬರೆದಿದೆ. (ಲೂಕಾ 23ನೇ ಅಧ್ಯಾಯ 46ನೇ ವಾಕ್ಯ) **"ತಂದೆ ನಿನ್ನ ಕೈಯಿಗೆ ನನ್ನ ಆತ್ಮವನ್ನು ಒಪ್ಪಿಸುತ್ತಿದ್ದೇನೆ ಎಂದನು. ಆತನು ಹೀಗೆ ಹೇಳಿ ಪ್ರಾಣ ಬಿಟ್ಟನು"** ಈ ಎರಡು ವಾಕ್ಯಗಳಲ್ಲಿ ಯೇಸು ಕೊನೆಯಲ್ಲಿ ಹೇಳಿದ ಮಾತನ್ನು ಚೆನ್ನಾಗಿ ವಿವರಿಸಿ ನೋಡಿದರೆ ಈ ವಿಧವಾಗಿ ಅರ್ಥವಾಗುತ್ತದೆ. ಯೇಸುವಿಗೆ ತನ್ನ ಶರೀರದಲ್ಲಿ ತಾನಲ್ಲದೆ ಮತ್ತೊಬ್ಬರು ತನಗೆ ಅಧಿಪತಿಯಾಗಿದ್ದಾನೆಂದು ತಿಳಿದಿತ್ತು. ನಮ್ಮ ಶರೀರದಲ್ಲಿ ನಾನು ಹೊರತು ಯಾರು ಇಲ್ಲ ಎಂದು ಮನುಷ್ಯ ಅಂದುಕೊಳ್ಳುತ್ತಾನೆ. ಆದರೆ ದೈವಜ್ಞಾನ ಸಂಪೂರ್ಣವಾಗಿ ತಿಳಿದ ಯೇಸುಪ್ರಭು ತನ್ನ ಶರೀರದಲ್ಲಿ ತನಗೆ ದೊಡ್ಡವನಾಗಿ ಇರುವವನು ತನಗೆ ದೈವವಾಗಿರುವವನು, ತನಗೆ ಪಕ್ಕದಲ್ಲಿರುವವನು, ತನಗೆ ಅಧಿಪತಿಯಾಗಿದ್ದು ತನ್ನನ್ನು ನಡೆಸುವವನು ಮತ್ತೊಬ್ಬನಿದ್ದಾನೆಂದು ಪೂರ್ತಿ ತಿಳಿದವನಾಗಿ, ಕೊನೆಯಲ್ಲಿ ಸಿಲುಬೆಯ ಮೇಲೆ ನನ್ನ ಆತ್ಮವನ್ನು ನಿನಗೆ ಒಪ್ಪಿಸುತ್ತಿದ್ದೇನೆಂದು ಹೇಳಿದ್ದಾನೆ. ಯೇಸು ಆತ್ಮ ಜೀವಾತ್ಮವಾಗಿದ್ದು, ಆತನಿಗೆ ಅಧಿಪತಿಯಾಗಿರುವುದು ಎರಡನೆಯ ಆತ್ಮ. ಯೇಸುಪ್ರಭುವಿನ ಶರೀರವನ್ನು ಎರಡನೆಯ ಆತ್ಮವೇ ನಡೆಸುತ್ತಿದೆ. ಆತನಿಗೇ ಅಲ್ಲ ನಮ್ಮ ಶರೀರದಲ್ಲಿಯೂ ಸಹ ನಮ್ಮ ಆತ್ಮವನ್ನು (ಜೀವಾತ್ಮವನ್ನು) ಎರಡನೇ ಆತ್ಮವೇ ನಡೆಸುತ್ತಿದೆ. ಶರೀರದಲ್ಲಿನ ನಾವು ಒಂದನೆಯ ಆತ್ಮವಾಗಿದ್ದು. ನಮ್ಮ ಶರೀರವನ್ನು ನಡೆಸುತ್ತಿರುವುದು ಎರಡನೇ ಆತ್ಮವೆಂದು ತಿಳಿಯಬೇಕು. ಈ

ಪದ್ಧತಿ ಸರ್ವ ಜೀವರಾಶಿಗಳಿಗೂ ಅನ್ವಯಿಸುವ ಸಿದ್ಧಾಂತವೆಂದು ಸಹ ತಿಳಿಯಬೇಕು. ಜ್ಞಾನಿಯಾದವನು ಯಾರಾದರು ನಾನು ಯಾವುದಕ್ಕೂ ಕರ್ತನು ಅಲ್ಲ. ಎಲ್ಲದಕ್ಕೂ ನನ್ನ ಎರಡನೆ ಆತ್ಮವೆ ಕರ್ತನೆಂದು ತಿಳಿದಿರುತ್ತಾನೆ. ಯೇಸು ಮಹಾಜ್ಞಾನಿ ಆಗಿರುವುದರಿಂದ ಕೊನೆಯಲ್ಲಿ ಮರಣ ಆಸನ್ನವಾದಾಗಲೂ ಸಹ ನನ್ನ ಆತ್ಮವನ್ನು ನಿನಗೆ ಅರ್ಪಿಸುತ್ತಿದ್ದೇನೆ, ನೀನು ಏನು ಮಾಡಬೇಕೆಂದು ಕೊಂಡಿದ್ದೀಯೊ ನಿನ್ನ ಇಷ್ಟದ ಪ್ರಕಾರ ಅದೇ ಮಾಡೆಂದು ಪೂರ್ತಿ ದಾಸೋಹ ಎಂದಿದ್ದಾನೆ. **ಪ್ರತಿ ಮನುಷ್ಯ ಪ್ರತಿ ವಿಷಯದಲ್ಲಿಯೂ ಆ ವಿಧವಾಗಿ ಇರಬೇಕೆಂದು, ತನ್ನನ್ನು ತಾನು ಕರ್ತನಾಗಿ ಯಾರೂ ಹೋಲಿಸಿಕೊಳ್ಳಬಾರದೆಂದು, ದೊಡ್ಡ ಜ್ಞಾನ ಸಂದೇಶವನ್ನು ಏಸು ಕೊನೆಯಲ್ಲಿಯೂ ಸಹ ಪ್ರಜೆಗಳಿಗೆ ತಿಳಿಸಿದ್ದಾನೆ.**

ಯೇಸು ಆ ವಿಧವಾಗಿ ಹೇಳಿದ ನಂತರ ಆತನ ಶರೀರದಲ್ಲಿ ವ್ಯಾಪಿಸಿರುವ ಆತ್ಮಶಕ್ತಿ ಶರೀರದಿಂದ ಬೆನ್ನುಮೂಳೆಯನ್ನು (ಬ್ರಹ್ಮನಾಡಿಯನ್ನು) ಸೇರಿ, ಅಲ್ಲಿಂದ ಶಿರಸ್ಸಿನ ಮಧ್ಯಭಾಗದಲ್ಲಿ ಸೇರಿಹೋಗಿದೆ. ಆ ಸಮಯದಲ್ಲಿ ಶರೀರದಲ್ಲಿನ ಅಂತರ್ಗತ ಕಾರ್ಯಗಳೆಲ್ಲವೂ ನಿಂತುಹೋಗಿ, ಹೊರಗೆ ಮರಣಿಸಿದ ಶರೀರಕ್ಕೆ ಸಮಾನವಾಗಿ ತಯಾರಾಗಿದೆ. ಒಳಗಿನ ಆತ್ಮ ಹೇಗೆ ಅಂದುಕೊಂಡರೆ ಹಾಗೆ ನಡೆಯುತ್ತದೆ. ಏಕೆಂದರೆ ಒಟ್ಟಾರೆ ಶರೀರಕ್ಕೆ ಆತ್ಮವೇ ಅಧಿಪತಿ, ಅಧಿಕಾರಿ. ಸ್ಥಂಭಿಸಿಹೋದ ಯೇಸು ಶರೀರದಲ್ಲಿನ ರಕ್ತವನ್ನು ಗಡ್ಡೆಕಟ್ಟದಂತೆ ಆತ್ಮವೇ ಮಾಡಿದೆ. ಆದ್ದರಿಂದ ಸೈನಿಕನು ಯೇಸು ಶರೀರವನ್ನು ಭರ್ಜಿಯಿಂದ ಇರಿದಾಗ ಗಾಯದಿಂದ ರಕ್ತ ಸೋರಿದೆ. ರಕ್ತ ಗಡ್ಡೆಕಟ್ಟದಿರುವು ದರಿಂದ ಯೇಸು ಮರಣಿಸಲಿಲ್ಲವೆಂಬ ಅನುಮಾನ ಬರುವಂತೆ ಆತ್ಮವೇ ಮಾಡಿದೆ. ಹಾಗೆಯೇ ಯೇಸು ಶರೀರವು ಸ್ಥಂಭಿಸಿ ಹೋಗಿ, ಶ್ವಾಸ ಆಡದಂತೆ ಇರುವುದರಿಂದ ಯೇಸು ಮರಣಿಸಿದ್ದಾನೆಂದು ನಂಬುವಂತೆ ಆತ್ಮವೆ ಮಾಡಿದೆ. ಆ ವಿಧವಾಗಿ ಎರಡು ವಿಧಗಳು ಕಾಣಿಸಿದಾಗ, ಯೇಸು ಮರಣವನ್ನು ಕುರಿತು ಯೋಚಿಸಿ ಅದರಲ್ಲಿನ ರಹಸ್ಯವನ್ನು ತಿಳಿದುಕೊಳ್ಳುತ್ತಾರೆಂದು, ಆತ್ಮ ಆ ವಿಧವಾಗಿ ಮಾಡುವುದು ನಡೆದಿದೆ. ಆದರೆ ಪ್ರಜೆಗಳು ಅದರಲ್ಲಿನ ಅಂತರಾರ್ಥವನ್ನು ಸ್ವಲ್ಪವೂ ಸಹ ಗಮನಿಸದಂತೆ, ಕೆಲವರು ಕ್ರೈಸ್ತರು ಅಲ್ಲದಿರುವವರು **"ಯೇಸು**

**ಸಿಲುಬೆಯ ಮೇಲೆ ಮರಣಿಸಲಿಲ್ಲ, ಆತನು ಮರಣಿಸಿದಂತೆ ನಟಿಸಿದ್ದಾನೆ. ಆಗ ಆತನು ಸತ್ತುಹೋಗಿದ್ದಾನೆಂದು ಎಲ್ಲರೂ ನಂಬಿ ಯೇಸುವನ್ನು ಸಮಾಧಿಯಲ್ಲಿ ಇಟ್ಟಿದ್ದಾರೆ. ಸಮಾಧಿಯಲ್ಲಿ ಒಂದುದಿನ ವಿಶ್ರಾಂತಿ ತೆಗೆದುಕೊಂಡು ಯೇಸು ಪುನಃ ಎದ್ದು ಬಂದಿದ್ದಾನೆ. ಅಷ್ಟೇ ಆಗಲಿ ಆತನ ಮರಣವನ್ನು ಜಯಿಸಿ ಎದ್ದುಬರಲಿಲ್ಲ. ಆತನು ಮರಣವನ್ನು ಜಯಿಸಿ ಬಂದವನಾಗಿ ಕ್ರೈಸ್ತರು ಹೇಳಿಕೊಳ್ಳುವುದು ಅಸತ್ಯ. ಕ್ರೈಸ್ತರು ತಮ್ಮ ಪ್ರಭುವನ್ನು ಮರಣ ಜಯಿಸಿದ ದೇವರಾಗಿ ಹೇಳಿಕೊಳ್ಳುವುದು ಅವರ ಮತ ಪ್ರಚಾರಕ್ಕೇ ಆಗಲಿ ಪ್ರಭು ಮರಣಿಸಲಿಲ್ಲ, ಪುನಃ ಬದುಕಲಿಲ್ಲ"** ಎನ್ನುತ್ತಿದ್ದಾರೆ.

ವಾಸ್ತವವಾಗಿ ಪ್ರಭುವು ಮರಣಿಸಲಿಲ್ಲವಾ? ಎಂದು ನಮ್ಮನ್ನು ಕೇಳಿದರೆ, ಆತನ ಶರೀರದಲ್ಲಿ ಎಲ್ಲ ಸ್ಥಂಭಿಸಿಹೋಗಿ, ಶ್ವಾಸ ಆಡದಂತೆ ಗುಂಡಿಗೆ ಕದಲದಂತೆ ಇರುವಾಗ, ಭೌತಿಕ ಸೂತ್ರದ ಪ್ರಕಾರ ಯೇಸು ಮರಣಿಸಿದ್ದಾನೆಂದೆ ಹೇಳಬಹುದು. ವಾಸ್ತವಕ್ಕೆ ಯೇಸು ಆ ಸಮಯದಲ್ಲಿ ಮರಣಿಸಿದ್ದಾನೆಂದು, ಆ ಮಾತಿನಲ್ಲಿ ಅಸತ್ಯ ಏನೂ ಇಲ್ಲವೆಂದು ನಾವು ಸಹ ಹೇಳುತ್ತಿದ್ದೇವೆ. ನಾವು ಕುರುಡರಂತೆ ಯಾವ ವಿಷಯವನ್ನು ಮಾತನಾಡುವುದಿಲ್ಲ. ನಾವು ಹೇಳುವ ಮಾತುಗಳು ಎಲ್ಲವೂ ಶಾಸ್ತ್ರಬದ್ಧವಾಗಿರಬೇಕೆಂದು ಅಂದುಕೊಳ್ಳುತ್ತೇವೆ. ನಿಷ್ಪಕ್ಷಪಾತವಾಗಿ, ಶಾಸ್ತ್ರಸಮ್ಮತ ವಾಗಿ ಸತ್ಯವನ್ನೇ ಹೇಳಬೇಕಾಗಿ ಬಂದರೆ ಒಂದು ಪದ್ಧತಿಯ ಪ್ರಕಾರ ನೋಡಿದರೆ ಭೌತಿಕಶಾಸ್ತ್ರದ ಸೂತ್ರದ ಪ್ರಕಾರ ಸತ್ತುಹೋದ ವ್ಯಕ್ತಿಗೆ ರಕ್ತ ಗಡ್ಡೆಕಟ್ಟಿದಂತೆ ನೀರಾಗಿರುವುದಿಲ್ಲ. ಆದ್ದರಿಂದ ಆತನು ಮರಣಿಸಲಿಲ್ಲವೆಂದು ಹೇಳಬಹುದು. ಎರಡನೆ ಪದ್ಧತಿಯಾಗಿ ನೋಡಿದರೆ ಅದೇ ಭೌತಿಕಶಾಸ್ತ್ರದ ಪ್ರಕಾರ ಶರೀರದಲ್ಲಿ ಗುಂಡಿಗೆ ನಿಂತುಹೋಗಿ, ಶ್ವಾಸ ನಿಂತುಹೋದ ವ್ಯಕ್ತಿಯನ್ನು ಮರಣಿಸಿದ್ದಾನೆಂದು ಹೇಳಬಹುದು. ಇದನ್ನನುಸರಿಸಿ ಕ್ರೈಸ್ತರು ಏಸು ಮರಣಿಸಿದ್ದಾನೆಂದು ಹೇಳುವ ಮಾತು ನಿಜವೇ! ಹಾಗೆಯೆ ಇತರರು ಏಸು ಮರಣಿಸಲಿಲ್ಲವೆಂದು ಹೇಳುವಮಾತು ನಿಜವೇ!! ಪರಸ್ಪರ ವಿರುದ್ಧವಾದ ಸಂಘಟನೆ ಶಾಸ್ತ್ರಬದ್ಧವು ಹೇಗೆ ಆಗುತ್ತದೆಂದು ಯಾರಾದರೂ ಇಲ್ಲಿ ಪ್ರಶ್ನಿಸಬಹುದು.

ಶಾಸ್ತ್ರದಲ್ಲಿ ಪರಸ್ಪರ ವಿರುದ್ಧ ಸೂತ್ರಗಳಿರುವು ದಿಲ್ಲ. ಆದ್ದರಿಂದ ಯೇಸುಪ್ರಭುವಿನ ಮರಣವನ್ನು ಕುರಿತು ಸತ್ಯ ತಿಳಿಯಬೇಕೆಂದರೆ, ಆತನ ಮರಣವನ್ನು ಷಟ್ (ಆರು) ಶಾಸ್ತ್ರಗಳಲ್ಲಿ ಯಾವ ಶಾಸ್ತ್ರವನ್ನು ಅನುಸರಿಸಿ ನೋಡಬೇಕೋ ಮೊದಲು ತಿಳುದುಕೊಳ್ಳಬೇಕು. ಹಾಗೆ ತಿಳಿದುಕೊಂಡರೆ ಆತನ ಮರಣ ವಿಷಯದಲ್ಲಿ ಭೌತಿಕ ಶಾಸ್ತ್ರವನ್ನು ಆಧಾರ ಮಾಡಿಕೊಂಡು ನೋಡಬಾರದೆಂದು ತಿಳಿಯುತ್ತಿದೆ. ಕೇವಲ ಕಾಣಿಸುವ ಶರೀರದವರೆಗೆ ಆದರೆ ಭೌತಿಕಶಾಸ್ತ್ರ ಕೆಲಸಕ್ಕೆ ಬರುತ್ತದೆ. ಆದರೆ ಇಲ್ಲಿ ಕಾಣಿಸದ ಜೀವಾತ್ಮ, ಆತ್ಮ ವಿಷಯವೂ ಸಹ ಇದೆ. ಆದ್ದರಿಂದ ಆತನ ಮರಣವನ್ನು ಆರನೆ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ನೋಡಬೇಕು. ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರವಾದರೆ ಮರಣವಿಷಯ ಅರ್ಥ ವಾಗುತ್ತದೆ.

ಬ್ರಹ್ಮವಿದ್ಯೆ ಎಂದರೆ ದೊಡ್ಡವಿದ್ಯೆ ಎಂದು ಅರ್ಥ. ಬ್ರಹ್ಮ ಅಂದರೆ ದೊಡ್ಡ ಎಂದು ಅರ್ಥ, ಬ್ರಹ್ಮವಿದ್ಯಾಶಾಸ್ತ್ರ ಅಂದರೆ ದೊಡ್ಡವಿದ್ಯಾಶಾಸ್ತ್ರ ಎಂದು ಅರ್ಥ. ಭೂಮಿ ಮೇಲೆ ನಮಗೆ ಇರುವವು ಕೇವಲ ಆರು ಶಾಸ್ತ್ರಗಳೆ ಎಂದು ಜ್ಞಾಪಕವಿಟ್ಟುಕೊಳ್ಳಬೇಕು. 1) ಗಣಿತಶಾಸ್ತ್ರ 2) ಖಗೋಳಶಾಸ್ತ್ರ 3) ರಸಾಯನಶಾಸ್ತ್ರ 4) ಭೌತಿಕಶಾಸ್ತ್ರ 5) ಜ್ಯೋತಿಷ್ಯಶಾಸ್ತ್ರ 6) ಬ್ರಹ್ಮವಿದ್ಯಾಶಾಸ್ತ್ರ. ಇವು ಹೊರತು ಶಾಸ್ತ್ರಗಳು ಇಲ್ಲ. ಈ ಆರು ಶಾಸ್ತ್ರಗಳಿಗೆ ಅನುಸಂಧಾನ ಶಾಸ್ತ್ರಗಳಿರ ಬಹುದು. ಆದರೆ ಷಟ್ ಶಾಸ್ತ್ರಗಳು ಹೊರತು ಭೂಮಿ ಮೇಲೆ ಹೆಚ್ಚಾಗಿ ಶಾಸ್ತ್ರಗಳು ಇಲ್ಲ. ಇವೆಯೆಂದರೆ ಅವು ಶಾಸ್ತ್ರಗಳು ಅಲ್ಲ. ವೃಕ್ಷ ಶಾಸ್ತ್ರವಿದೆ ಅಲ್ಲವೆ ಎಂದು ಯಾರಾದರು ಕೇಳಿದರೆ ಅದು ಭೌತಿಕಶಾಸ್ತ್ರಕ್ಕೆ ಸಂಬಂಧಿಸಿರುವುದೆ ಎಂದು ಹೇಳಿರಿ. ಈಗ ಅಸಲು ವಿಷಯಕ್ಕೆ ಬರೋಣ. ಬ್ರಹ್ಮವಿದ್ಯಾಶಾಸ್ತ್ರವಾದ ಭಗವದ್ಗೀತೆ ಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ ಎಂಟನೆಯ ಶ್ಲೋಕ.

**ಶ್ಲೋ॥ *ಶರೀರಂ ಯ ದವಾಪ್ನೋತಿ ಯಚ್ಚಾಪ್ಯುತ್ಕ್ರಾ ಮತೀಶ್ವರಃ।***
***ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್॥***

ಮೇಲಿನ ಶ್ಲೋಕದಲ್ಲಿನ ಸಾರಾಂಶ ಏನೆಂದರೆ! "ಒಬ್ಬ ಜೀವಿಯು ಶರೀರವನ್ನು ಬಿಟ್ಟು ಹೋಗಬೇಕೆಂದಾಗ, ಅವನಜೊತೆ ಅವನಿಗೆ ಅಧಿಪತಿ ಇಲ್ಲವೆ ಈಶ್ವರನಾಗಿರುವ ಆತ್ಮ ನಾಲ್ಕುಚಕ್ರಗಳ ಸಮೂಹದಲ್ಲಿರುವ ಜೀವಿಯನ್ನು, ಗುಣಗಳನ್ನೂ, ಕರ್ಮವನ್ನೂ ತೆಗೆದುಕೊಂಡು ಗಾಳಿಯಲ್ಲಿ ಸುವಾಸನೆ ಕಣ್ಣಿಗೆ ಕಾಣಿಸದಹಾಗೆ ಹೋದಂತೆ ಯಾರಿಗೂ ತಿಳಿಯದಂತೆ ಮತ್ತೊಂದು ಶರೀರಕ್ಕೆ ಹೋಗುತ್ತದೆ."

ಮೇಲಿನ ಶ್ಲೋಕದ ಪ್ರಮಾಣದ ಪ್ರಕಾರ ಶರೀರಕ್ಕೆ ಅಧಿಪತಿಯಾಗಿರುವ ಆತ್ಮ ತನ್ನಜೊತೆ ಜೀವಿಯನ್ನು, ಕರ್ಮಗಳನ್ನು, ಗುಣಗಳನ್ನು ತೆಗೆದುಕೊಂಡು ಹೋಗುವುದನ್ನು ಮರಣ ಎನ್ನುತ್ತೇವೆ. ಒಂದುಬಾರಿ ಆತ್ಮ ಶರೀರವನ್ನು ಬಿಟ್ಟುಹೋದರೆ ಅದು ನಿಜವಾಗಲು ಮರಣವಾಗುತ್ತದೆ. ಒಂದುಬಾರಿ ಮರಣಿಸಿದರೆ ಆ ಶರೀರದೊಳಗೆ ಪುನಃ ಆತ್ಮ ಸೇರುವುದಿಲ್ಲ. ಇದು ಶಾಸ್ತ್ರಬದ್ಧವಾದ ಸೂತ್ರ. ಶರೀರವನ್ನು ಆತ್ಮ ಬಿಟ್ಟರೆ ಪುನಃ ಹೊಸ ಶರೀರದಲ್ಲಿ ಪ್ರವೇಶಿಸುತ್ತದೆ, ಆದರೆ ಹಳೆ ಶರೀರದಲ್ಲಿ ಪ್ರವೇಶಿಸುವುದು ನಿಷೇಧ, ಇದು ಶಾಸ್ತ್ರ, ಅದರಲ್ಲಿಯೂ ದೊಡ್ಡಶಾಸ್ತ್ರ ವೊಂದರ ಸೂತ್ರ, ಆದ್ದರಿಂದ ಎಂದಿಗೂ ಬದಲಾಗುವುದು ಅಲ್ಲ. ಯೇಸುಪ್ರಭು ಶರೀರದಲ್ಲಿನ ಆತ್ಮ ಶರೀರವನ್ನು ಬಿಟ್ಟುಹೋಗಲಿಲ್ಲ. ಆದ ಕಾರಣ ಅದನ್ನು ಕಾಲಮರಣವೆಂದು ಅನ್ನಬಾರದು. ಯೇಸು ಶರೀರದಲ್ಲಿನ ಕದಲಿಕೆಗಳೆಲ್ಲವೂ ಬ್ರಹ್ಮನಾಡಿಯಲ್ಲಿನ ಆತ್ಮದಲ್ಲಿ ಅಡಕವಾಗಿವೆ. ಆತ್ಮ ಚೈತನ್ಯ ಆತನ ತಲೆ ಭಾಗದಲ್ಲಿ ನಿಂತಿದೆ, ಆದ್ದರಿಂದ ಆತನು ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆ. ಆದರೆ ಮರಣವನ್ನು ಹೊಂದಲಿಲ್ಲ. ತಾತ್ಕಾಲಿಕ ಮರಣ ಹೊರಗೆ ಮನುಷ್ಯ ಮರಣಿಸಿದಂತೆ ಇರುತ್ತದೆ. ಆದ್ದರಿಂದ ಯೇಸು ಮರಣಿಸಿದ್ದಾನೆಂದು ಎಲ್ಲರೂ ಅಂದಿದ್ದಾರೆ. ಭೌತಿಕಶಾಸ್ತ್ರದ ಪ್ರಕಾರ ಕೆಲವರು "ರಕ್ತ ಗಡ್ಡೆಕಟ್ಟಲಿಲ್ಲ ಆದ್ದರಿಂದ ಆತನು ಬದುಕಿದ್ದಾನೆಂದು" ಅಂದಿದ್ದಾರೆ. ಇಲ್ಲಿ ಭೌತಿಕ ಶಾಸ್ತ್ರದಿಂದ ಸಮಸ್ಯೆ ಪರಿಷ್ಕಾರ ಆಗುವುದಿಲ್ಲ. ಇದು ಆತ್ಮಕ್ಕೆ ಸಂಬಂಧಿಸಿದ ಸಾವು, ಬದುಕುಗಳ ವಿಷಯ. ಆದ್ದರಿಂದ

ಬ್ರಹ್ಮವಿದ್ಯಾಶಾಸ್ತ್ರದಿಂದಲೇ ಪರಿಷ್ಕರಿಸಬೇಕು. **ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಯೇಸು ನಿದ್ರಾವಸ್ಥೆಯೊಳಗೆ ಹೋಗಿ ತಾತ್ಕಾಲಿಕ ಮರಣ ಹೊಂದುವುದರಿಂದ ಹೊರಗೆ ಮರಣಿಸಿದಂತೆ, ಒಳಗೆ ಬದುಕಿರುವಂತೆ ಲೆಕ್ಕಿಸಲ್ಪಡುತ್ತದೆ.**

ತಲೆಯಲ್ಲಿ ಅಡಗಿರುವ ಆತ್ಮ ರಕ್ತವನ್ನೂ ಸಹ ಗಡ್ಡೆಕಟ್ಟುವಂತೆ ಮಾಡಬಲ್ಲದು. ಆದರೆ ಏಸು ಮರಣದಿಂದ ಮರಣ ವಿಷಯದಲ್ಲಿ ಪ್ರಜೆಗಳಿಗೆ ಕಣ್ತೆರೆಸಬೇಕೆಂದು, ತಾತ್ಕಾಲಿಕ ಮರಣವನ್ನು ಕುರಿತು ಅರ್ಥವಾಗಬೇಕೆಂದು, ಯೇಸು ಆತ್ಮ ಆ ವಿಧವಾಗಿ ಮಾಡಿದೆ. ಇದರಿಂದ ಯೇಸು ಮರಣ ಪ್ರಜೆಗಳನ್ನು ಹೌದೆಂದು, ಅಲ್ಲವೆಂದು ಸಂದಿಗ್ದದಲ್ಲಿ ಬೀಳಿಸಿದೆ. ಆದರೂ ಅದನ್ನು ಕುರಿತು ಯಾರು ಯೋಚಿಸಿ ಶಾಸ್ತ್ರಬದ್ಧವಾದ ಉತ್ತರವನ್ನು ಹೇಳಲಾರದೆಹೋಗಿದ್ದಾರೆ.

ಯೇಸು ಮರಣಿಸಿದ್ದಾನೆಂದು ನಿರ್ಧಾರಿಸಿಕೊಂಡ ನಂತರ, ಸಿಲುಬೆಯ ಮೇಲಿಂದ ಆತನ ಶರೀರವನ್ನು ಇಳಿಸಿ ಸಮಾಧಿಯಲ್ಲಿ ಇಡುವುದು ನಡೆದಿದೆ. ಸಮಾಧಿ ಎಂದರೆ ಮಣ್ಣಿನಲ್ಲಿ ಇಟ್ಟಿರುವುದು ಅಲ್ಲ. ಕಲ್ಲಿನ ಗುಹೆಯನ್ನು ಆ ದಿನ ಸಮಾಧಿ ಎಂದಿದ್ದಾರೆ. ಏಸು ಶರೀರವನ್ನು ಕಲ್ಲಿನ ಗುಹೆಯಲ್ಲಿ ಇಟ್ಟು, ಆ ಗುಹೆ ದ್ವಾರಕ್ಕೆ ಒಂದು ಕಲ್ಲನ್ನು ಅಡ್ಡವಾಗಿ ಇಡುವುದು ನಡೆದಿದೆ. ಯೇಸು ಶುಕ್ರವಾರ ಬೆಳಗ್ಗೆ 9 ಗಂಟೆಗಳಿಗೆ ಸಿಲುಬೆ ಹಾಕಿದಾಗ, ಆತನು ಮಧ್ಯಾಹ್ನ ಮೂರುಗಂಟೆಗಳಿಗೆ ಮರಣಿಸಿ, ಸಾಯಂಕಾಲಕ್ಕೆ ಆತನನ್ನು ಕಲ್ಲಿನಗುಹೆಯಲ್ಲಿ ಇಟ್ಟು ಮುಚ್ಚಿಹಾಕಿದರು. ಶನಿವಾರ ಎಲ್ಲವೂ ಯೇಸು ನಿದ್ರಾವಸ್ಥೆಯಲ್ಲಿಯೇ ಇದ್ದಾನೆ. ಭಾನುವಾರ ಸೂರ್ಯೋದಯಕ್ಕೆ ಮುನ್ನವೆ ಯೇಸು ದೇಹದಲ್ಲಿನ ಆತ್ಮ ತನ್ನ ಶಕ್ತಿಯನ್ನು ಶರೀರವೆಲ್ಲಾ ಹರಡುವಂತೆ ಮಾಡಿದೆ. ಆಗ ಯೇಸು ಶರೀರದಲ್ಲಿನ ಗುಂಡಿಗೆ ಕದಲಿ ಕೆಲಸ ಮಾಡಿದಾಗ ರಕ್ತಪ್ರಸರಣೆ, ಶ್ವಾಸ ಆಡುವುದಕ್ಕೆ ಆರಂಭಿಸಿದೆ. ಆ ಸಮಯದಲ್ಲಿ ಯೇಸುವಿಗೆ ನಿದ್ರೆಯಿಂದ ಜ್ಞಾಪಕ ಬಂದಂತೆ ಆತನ ಆತ್ಮ ಮಾಡಿದಾಗ, ಯೇಸು ಎದ್ದು ಕುಳಿತುಕೊಂಡು ತಾನು ಸಿಲುಬೆ ಮೇಲೆ ಶಿಕ್ಷೆ ಹಾಕಿದ ನಂತರ ನಿದ್ರೆಯೊಳಗೆ ಹೋದಂತೆ ಅರ್ಥಮಾಡಿಕೊಂಡನು. ಯೇಸು ಶನಿವಾರ ದಿನವೆಲ್ಲಾ ಸಮಾಧಿಯಲ್ಲಿ ನಿದ್ರೆಯಲ್ಲಿದ್ದಾನೆ. ಆದ್ದರಿಂದ

ಆ ದಿನವನ್ನು ವಿಶ್ರಾಂತಿ ದಿನ ಎಂದಿದ್ದಾರೆ. ತಾನು ಬದುಕಿರುವಂತೆ ತನ್ನ ಶಿಷ್ಯರಿಗೆ ತಿಳಿಸಬೇಕೆಂದು ಮೊದಲು ತನ್ನ ಶಿಷ್ಯರ ಹತ್ತಿರಕ್ಕೆ ಹೊರಟನು. ಮೊದಲು ಮಗ್ದಲೇನ ಮರಿಯಳೊಂದಿಗೆ ಮಾತನಾಡಿ, ನಂತರ ಹೋಗಿ ತನ್ನ ಶಿಷ್ಯರತ್ತಿರ ಸೇರಿದನು. ಶಿಷ್ಯರು ಆತನನ್ನು ನೋಡಿ ದೆವ್ವವೆಂದು ಅನುಮಾನಿಸಿದಾಗ, **"ಅಲ್ಲ, ನಾನು ಮೊದಲಿನಿಂದ ಇರುವ ನಿಮ್ಮ ಯೇಸುವೆ ಎಂದು"** ಹೇಳಿ ಅವರಿಗೆ ಸಾಕ್ಷ್ಯವಾಗಿ ತನ್ನ ಶರೀರದ ಮೇಲಿರುವ ಗಾಯಗಳನ್ನು ಸಹ ತೋರಿಸಿದನು. ಅದರಿಂದ ಅಲ್ಲಿಗೆ ಬಂದಿರುವುದು ಸಿಲುಬೆಯ ಮೇಲೆ ಮೊಳೆಗಳು ಹೊಡೆದಾಗ ಗಾಯಗೊಂಡಿರುವ ತಮ್ಮ ಯೇಸುಪ್ರಭುವೆ ಎಂದು ಆತನ ಶಿಷ್ಯರು ಗುರ್ತು ಹಿಡಿದಿದ್ದಾರೆ. ಆತನ ಶರೀರದ ಮೇಲೆ ಗಾಯದ ಗುರುತುಗಳು ಸಿಲುಬೆ ಹತ್ತಿದ ಶರೀರವೆ ಎನ್ನುವುದಕ್ಕೆ ಆಧಾರವಾಗಿವೆ. **ಇದರಿಂದ ಯೇಸು ಸಿಲುಬೆ ಮೇಲೆ ಮರಣಿಸಿದರೂ, ಅದು ಎಲ್ಲರಿಗೂ ತಿಳಿದ ಕಾಲಮರಣವು ಅಲ್ಲವೆಂದು, ಯಾರಿಗೂ ತಿಳಿಯದಂತೆ ಅಕಾಲ ಮರಣವು ಅಲ್ಲವೆಂದು, ಇಲ್ಲಿಯವರೆಗೂ ಯಾರ ಊಹೆಗೆ ಸಿಗದಂತೆ ರಹಸ್ಯವಾಗಿರುವ ತಾತ್ಕಾಲಿಕ ಮರಣವೆಂದು ತಿಳಿದುಹೋಗಿದೆ.**



## ತಾತ್ಕಾಲಿಕ ಮರಣಗಳು ಇನ್ನೂ ಯಾರಿಗಾದರು ಇವೆಯಾ?

ತಾತ್ಕಾಲಿಕ ಮರಣ ಅವರವರ ಕರ್ಮವನ್ನನುಸರಿಸಿ ಉಳಿದ ಜೀವರಾಶಿಗಳಿಗೂ ಸಹ ಇವೆ. ಹುಟ್ಟಿದ ಪ್ರತಿ ಜೀವರಾಶಿಗೂ ಕಾಲಮರಣ ತಪ್ಪದೆ ಇರುತ್ತದೆ. ಅಕಾಲ ಮರಣ ಇರಬಹುದು, ಇಲ್ಲದಿರಬಹುದು. ಹಾಗೆಯೇ ತಾತ್ಕಾಲಿಕ ಮರಣವೆಂಬುವುದು ತಪ್ಪದೆ ಇರುತ್ತದೆಂದು ಹೇಳಲಾರೆವು. ಕರ್ಮವನ್ನನುಸರಿಸಿ ಎಲ್ಲವೂ ಇರುತ್ತವೆ. ಆದ್ದರಿಂದ ಅಂತಹ ಕರ್ಮವಿದ್ದರೆ ಯಾವ ಜೀವರಾಶಿಗಾದರು ತಾತ್ಕಾಲಿಕ ಮರಣ ತಪ್ಪುವುದಿಲ್ಲ. ಇದರ ವಿಷಯದಲ್ಲಿ ಕೆಲವರಿಗೆ ಎಷ್ಟು ಹೇಳಿದರೂ ನಂಬದಿಬಹುದು. ಅಂತಹವರು ಸಹ ಇದು ನಿಜವೆಂದು ತಿಳಿದುಕೊಳ್ಳುವಂತೆ, ಕೆಲವು ವಿಧಗಳಾದ ಕೀಟಕಗಳಿಗೆ ತಪ್ಪದೆ

ತಾತ್ಕಾಲಿಕ ಮರಣವಿರುವಂತೆ ಕರ್ಮಜೋಡಣೆ ಇದೆ. (Cryogenic Bugsicles) ಎನ್ನುವ ಹೆಸರಿರುವ ಒಂದು ವಿಧವಾದ ಮಿಡಿತೆಯಂತಹ ಕೀಟಕವು ಮಂಜು ಪ್ರಾಂತದಲ್ಲಿ ಜೀವನವನ್ನು ಸಾಗಿಸುತ್ತಾ, ಮಂಜು ಇಲ್ಲದ ಕಾಲದಲ್ಲಿ ಮಾತ್ರ ತನ್ನ ಜೀವನವನ್ನು ಸಾಫಿಯಾಗಿ ಸಾಗಿಸುತ್ತಿರುತ್ತದೆ. ಮಂಜು ಹೆಚ್ಚಾದ ಚಳಿಗಾಲದಲ್ಲಿ ಮಂಜಿನಲ್ಲಿ ನಿಂತುಹೋಗಿ ಸತ್ತುಹೋಗುತ್ತದೆ. ಹಾಗೆ ಸತ್ತುಹೋದ ಕೀಟಕದ ಮೇಲೆ ಮಂಜು ಗಡ್ಡೆಕಟ್ಟಿಹೋಗಿ ಮಂಜಿನಲ್ಲಿ ಸಮಾಧಿಯಾಗುತ್ತದೆ. ಹಾಗೆ ಸುಮಾರು ಆರು ತಿಂಗಳ ಕಾಲವಿರುತ್ತದೆ. ನಂತರ ವಾತಾವರಣ ಬದಲಾಗಿ ಮಂಜು ಕರಿಗಿಹೋದಾಗ ಆ ಕೀಟಕವು ಹೊರಗೆ ಕಾಣಿಸುತ್ತದೆ. ಹಾಗೆ ಕಾಣಿಸಿದ ಕೀಟಕವು ಪುನಃ ಪ್ರಾಣ ತಂದುಕೊಂಡು ಎಗರಿಹೋಗುವುದು, ತನ್ನ ಜೀವನವನ್ನು ಪುನಃ ಸಾಗಿಸುವುದು ನಡೆಯುತ್ತಿದೆ. ಇದು ಪ್ರತಿ ವರ್ಷ ಪ್ರತ್ಯಕ್ಷವಾಗಿ ನಡೆಯುತ್ತಿರುವ ಕಾರ್ಯ. ಇದನ್ನು (N.G) ಟಿವಿ ಛಾನಲ್ ತೋರಿಸಿದೆ. ಯೇಸುಪ್ರಭು ಮೂರನೆದಿನ ಎದ್ದಿದ್ದಾನೆ ಎಂದರೆ ನಂಬದಿರುವವರು ಸಹ, ಈ ಕೀಟಕವು ಸತ್ತುಹೋಗಿ ಪುನಃ ಆರು ತಿಂಗಳಿಗೆ ಮೇಲೇಳುತ್ತದೆ ಎಂದರೆ ತಪ್ಪದೆ ನಂಬಲೇಬೇಕು. ತಾತ್ಕಾಲಿಕ ಮರಣ ಎಷ್ಟೋ ಜೀವರಾಶಿಗಳಿಗೆ ಉಂಟಾದಲ್ಲಿಯೂ ಅವುಗಳನ್ನು ಗುರುತಿಸುವುದಕ್ಕೆ ಸಾಧ್ಯವಿಲ್ಲ. ಅಂತಹವುಗಳನ್ನು ಸಹಜ ಮರಣವೆ ಎಂದುಕೊಳ್ಳುತ್ತೇವೆ. ಆದರೆ ತಾತ್ಕಾಲಿಕ ಮರಣವೆಂಬುವುದೊಂದು ಇದೆಯೆಂದು ಎಲ್ಲರಿಗೂ ತಿಳಿಯುವಂತೆ ಪ್ರಕೃತಿಯಲ್ಲಿ ಆರು ತಿಂಗಳು ಸತ್ತುಹೋಗಿ, ಆರು ತಿಂಗಳು ಜೀವಿಸುವ ಕೀಟಕವನ್ನು ತಯಾರುಮಾಡಲಾಗಿದೆ. ಅದನ್ನು ನೋಡಿದ ನಂತರ ಯಾರಾದರು ತಾತ್ಕಾಲಿಕ ಮರಣವೆನ್ನುವುದು ಒಂದಿದೆ ಎಂದು ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ತಾತ್ಕಾಲಿಕ ಮರಣ ಎಷ್ಟುದಿನ ಇರುತ್ತದೆ ಎನ್ನುವುದಕ್ಕೆ ಖಚಿತವಾದ ಉತ್ತರ ಇಲ್ಲ. ಏಕೆಂದರೆ ತಾತ್ಕಾಲಿಕ ಮರಣ ಅವರವರ ಕರ್ಮವನ್ನನುಸರಿಸಿ ಆಗಿಂದಾಗ್ಗೆ ನಿರ್ಣಯಿಸಲ್ಪಡುವುದು. ಆದ್ದರಿಂದ ಯೇಸುಪ್ರಭುವಿಗೆ ಮೂರುದಿನಗಳಿಗೆ. ಇತರರಿಗೆ ಕರ್ಮವನ್ನನುಸರಿಸಿ 30 ದಿನಗಳಾದರು ಇರಬಹುದು, ಮೂರು ಗಂಟೆಗಳಾದರು ಇರಬಹುದು.

# ತಾತ್ಕಾಲಿಕ ಮರಣವನ್ನು ಗತಕಾಲದಲ್ಲಿ ಯಾರಾದರು ಗುರುತಿಸಿದ್ದಾರಾ?

ತಾತ್ಕಾಲಿಕ ಮರಣ ಸೃಷ್ಟಿ ತಯಾರಾದಾಗಿನಿಂದ ಇದೆ. ಕೆಲವರು ಆಧ್ಯಾತ್ಮಿಕತಜ್ಞರು ಅದನ್ನು ಗುರ್ತಿಸಿದ್ದಾರೆ. 100 ವರ್ಷಗಳ ಪೂರ್ವಕಾಲದಲ್ಲಿ ತಮಿಳುನಾಡು ರಾಷ್ಟ್ರದಲ್ಲಿನ ಕುಂಭಕೋಣದಲ್ಲಿ ಮಾಸ್ಟರ್ C.V.V. ರಾಮನ್ ಎನ್ನುವ ಹೆಸರಿರುವ ಒಬ್ಬ ಆಧ್ಯಾತ್ಮಿಕತಜ್ಞ ಇದ್ದನು. ಆತನು ಆ ಪ್ರಾಂತದಲ್ಲಿ ಆಗಿನ ಕಾಲದಲ್ಲಿ ದೊಡ್ಡ ಗುರುವಾಗಿ ಹೆಸರುವಾಸಿಯಾದವನು. ಆತನ ಶಿಷ್ಯರಾದ ಹೊಸ ರಾಮಕೋಟಯ್ಯ, ಸಂಗಮೇಶ್ವರರಾವು ಎಂಬ ಇಬ್ಬರು ಶಿಷ್ಯರು "ಬೃಕ್ತ ರಹಿತ ತಾರಕ ರಾಜಯೋಗಮು" ಎಂಬ ಗ್ರಂಥದಲ್ಲಿ 13ನೇ ಪೇಜಿನಲ್ಲಿ, 1911ನೇ ವರ್ಷದಂದು ನಡೆದ ಒಂದು ಸಂಘಟನೆಯನ್ನು ಕುರಿತು ಬರೆದಿದ್ದಾರೆ. ಒಂದು ದಿನ C.V.V ರಾಮನ್‌ರವರು ಅತ್ಯವಸರ ಕೆಲಸದ ಮೇಲೆ ಪ್ರಯಾಣವಾಗಿ ಹೋಗುವ ಸಮಯದಲ್ಲಿ, ಆತನ ದತ್ತು ತಾಯಿ ಆದ ಕಂಚುಪಟ್ಟಿ ಸುಬ್ಬಮ್ಮನವರು, ಕಾವೇರಿ ನದಿಗೆ ಸ್ನಾನಕ್ಕೆ ಹೋಗಿ ಬರುವ ಸಮಯದಲ್ಲಿ ಕೆಳಗೆಬಿದ್ದು ಸತ್ತುಹೋಗಿದ್ದಾಳಂತೆ. ಆಕೆಯ ಮರಣ ವಿಷಯವನ್ನು ತಿಳಿದ C.V.V. ರಾಮನ್‌ರವರು ತಾನು ತಿರುಗಿ ಬರುವವರೆಗು ಆಕೆಯ ಶರೀರವನ್ನು ಇರುವೆಗಳು ಮುತ್ತದಂತೆ ಜಾಗ್ರತೆಯಾಗಿ ಮನೆಯಲ್ಲಿಯೆ ಇಟ್ಟುಕೊಳ್ಳಿ ಎಂದು ಹೇಳಿದ್ದನಂತೆ. ಆಗ ಮನೆಯಲ್ಲಿರುವವರು ಹಾಗೆ ಸುಬ್ಬಮ್ಮನವರ ಶರೀರವನ್ನು ಜಾಗ್ರತೆಯಾಗಿ ಇಡುವುದು ನಡೆದಿದೆ. ನಂತರ 16 ದಿನಗಳಿಗೆ C.V.V. ರಾಮನ್‌ರವರು ಬಂದ ನಂತರ ಆಕೆಯನ್ನು ಬದುಕಿಸುವುದು ನಡೆದಿದೆಯಂತೆ. ಆಗ ಆಕೆಯ ವಯಸ್ಸು 80 ವರ್ಷಗಳಾಗಿದ್ದು. ಪುನಃ ಆಕೆ ಬದುಕಿದ ನಂತರ ಮೂರು ವರ್ಷಗಳು ಜೀವಿಸುವುದು ನಡೆದಿದೆ. 80 ವರ್ಷಗಳ ತಾಯಿಯನ್ನು ಬದುಕಿಸಿದ C.V.V. ರಾಮನ್‌ರವರು, 30 ವರ್ಷಗಳ ಅಳಿಯ ಮರಣಿಸಿದರೆ ಆತನನ್ನು ಬದುಕಿಸಲಿಲ್ಲ. ಇದರಿಂದ ತನ್ನ ತಾಯಿ ಪೂರ್ತಿ ಮರಣಿಸಲಿಲ್ಲವೆಂದು, ಆಕೆ ತಾತ್ಕಾಲಿಕ ಮರಣವನ್ನು ಹೊಂದಿದ್ದಾಳೆಂದು ತಿಳಿದ C.V.V. ರಾಮನ್‌ರವರು ತನ್ನ ತಾಯಿಯನ್ನು ಬದುಕಿಸಿಕೊಂಡಿದ್ದಾನೆಂದು ತಿಳಿಯುತ್ತಿದೆ. ಇದರಿಂದ

ರಾಮನ್‌ರವರು ಆಗಿನ ಕಾಲದಲ್ಲಿಯೇ ಕಾಲ ಮರಣವನ್ನೂ, ತಾತ್ಕಾಲಿಕ ಮರಣವನ್ನು ಗುರ್ತಿಸಲ್ಪಟ್ಟಿದ್ದಾನೆಂದು ಅರ್ಥವಾಗುತ್ತದೆ.

ಮೇಲಿನ ವಿಷಯ ನೂರು ವರ್ಷಗಳ ಕೆಳಗಿನದಾದರೆ, 5200 ವರ್ಷಗಳ ಕೆಳಗೆ ಶ್ರೀಕೃಷ್ಣನ ಸಮಕ್ಷಮದಲ್ಲಿ ನಡೆದ ವಿಷಯವನ್ನು ಸಹ ಪ್ರಸ್ತಾವಿಸಿಕೊಳ್ಳೋಣ. ಶ್ರೀಕೃಷ್ಣನಿಗೆ ಬಾಲ್ಯದಲ್ಲಿ ಪ್ರಪಂಚ ವಿದ್ಯೆಗಳನ್ನು ಕಲಿಸಿದ ಗುರುವು ಸಾಂದೀಪನು. ಸಾಂದೀಪನ ಕುಮಾರನು ಚಿಕ್ಕ ವಯಸ್ಸಿನಲ್ಲಿಯೇ ಮರಣಿಸಿದಾಗ ಸಾಂದೀಪನು ಬಹಳ ರೋದಿಸಿದನು. ಗುರುಗಳಾದ ಸಾಂದೀಪನನ್ನು ಸಮಾಧಾನಪಡಿಸುವುದಕ್ಕೆ ಹೋದ ಶ್ರೀಕೃಷ್ಣನು ಗುರುಗಳ ದುಃಖವನ್ನು ನೋಡಲಾರದೆ ಸತ್ತುಹೋದ ಬಾಲಕನನ್ನು ಪುನಃ ಬದುಕಿಸಿದ್ದಾನೆಂದು ಚರಿತ್ರೆಯಲ್ಲಿ ಇದೆ. ನೂರು ವರ್ಷಗಳ ಪೂರ್ವಕಾಲದಲ್ಲಿ ಮಾಸ್ಟರ್ C.V.V. ರಾಮನ್‌ರವರು ಅವರ ದತ್ತು ತಾಯಿಯನ್ನು ಬದುಕಿಸಿದರೂ, 5200 ವರ್ಷಗಳ ಪೂರ್ವಕಾಲದಲ್ಲಿ ಶ್ರೀಕೃಷ್ಣನು ತನ್ನ ಗುರುಗಳಾದ ಸಾಂದೀಪನ ಕುಮಾರನನ್ನು ಬದುಕಿಸಿದರೂ, ಆ ಎರಡು ಮರಣಗಳು ಕಾಲ ಮರಣಗಳು ಅಲ್ಲವೆಂದು, ಅವು ತಾತ್ಕಾಲಿಕ ಮರಣಗಳೆಂದು ನಮಗೆ ಅರ್ಥವಾಗುತ್ತಿದೆ. ಕಾಲ ಮರಣವನ್ನು ಹೊಂದಿದವನು ಪುನಃ ಬದುಕುವುದಕ್ಕೆ ಸಾಧ್ಯವಿಲ್ಲವೆಂದು ಮುಂಚೆಯೆ ಹೇಳಿಕೊಂಡಿದ್ದೇವೆ. ಒಂದುಬಾರಿ ಮರಣಿಸಿದ ಅವನು ಪುನಃ ತಾನಾಗಿ ಬದುಕಿದರೂ, ಇಲ್ಲವೆ ಇತರರಿಂದ ಬದುಕಲ್ಪಟ್ಟರೂ, ಅವರು ಹೊಂದಿರುವುದು ತಾತ್ಕಾಲಿಕ ಮರಣವೆಂದು ತಿಳಿದುಹೋಗುತ್ತಿದೆ. ತಾತ್ಕಾಲಿಕ ಮರಣವನ್ನು ಹೊಂದಿದವನನ್ನು ಯಾರಾದರೂ ಬದುಕಿಸಿದ್ದಾರೆಂದರೆ, ಅವರಿಗೆ ಸತ್ತುಹೋದವನು ತಾತ್ಕಾಲಿಕ ಮರಣವನ್ನು ಹೊಂದಿದವನೆಂದು ಮೊದಲೆ ತಿಳಿದಿರುತ್ತದೆ. ಅವರು ಸತ್ತುಹೋದರು ಅವರದು ತಾತ್ಕಾಲಿಕ ಮರಣವೆಂದು ಹೇಗೆ ತಿಳಿದುಕೊಂಡಿದ್ದಾರೋ ವಿವರಿಸಿ ಹೇಳುವುದಕ್ಕೆ ನನಗೂ ಸಹ ತಿಳಿದಿಲ್ಲ. ಅವರು ಹೇಗೆ ತಿಳಿದುಕೊಂಡಿದ್ದಾರೋ ಹೇಳುವುದಕ್ಕೆ ನನ್ನ ಹತ್ತಿರ ಆಧಾರವಾದ ಉತ್ತರ ಇಲ್ಲ. ಅವರು ಹೇಗೆ ತಿಳಿದು ಕೊಂಡಿದ್ದಾರೆನ್ನುವುದು ಇಲ್ಲಿ ಪ್ರಶ್ನೆಯಲ್ಲ. ಅವರಿಗೆ ತಾತ್ಕಾಲಿಕ ಮರಣವನ್ನು ಕುರಿತು ತಿಳಿದಿದೆ ಎಂದು ಹೇಳಬಹುದು.

ಗತಕಾಲದಲ್ಲಿ ತಾತ್ಕಾಲಿಕ ಮರಣವನ್ನು ಕುರಿತು ತಿಳಿದವರೂ, ಕೆಲವರು ಸತ್ತುಹೋದವರೂ ದೊಡ್ಡ ಆಧ್ಯಾತ್ಮಿಕತಜ್ಞರೆಂಬ ಮಾತು ನಿಜವೇ. ಅಷ್ಟು ದೊಡ್ಡವರು ತಾತ್ಕಾಲಿಕ ಮರಣವನ್ನು ಹೊಂದಿದವನನ್ನು ಗುರುತಿಸಿ ಬದುಕಿಸಿದಾಗ, ಅದನ್ನು ನಾವು ದೊಡ್ಡ ಮಹತ್ವವಾಗಿ ಹೇಳಿಕೊಂಡಿದ್ದೇವೆ. ನಾವು ಮಾತ್ರ ಅಂತಹ ಮರಣವನ್ನು ಕುರಿತು ಸ್ವಲ್ಪವೂ ಸಹ ತಿಳಿದುಕೊಳ್ಳದೆ ಹೋಗಿದ್ದೇವೆ. ಈಗಲೂ ಸಹ ಸ್ವಲ್ಪವಾದರೂ ತಾತ್ಕಾಲಿಕ ಮರಣವನ್ನು ಕುರಿತು ಅರ್ಥ ಮಾಡಿಕೊಂಡಿಲ್ಲ ಎನ್ನುವುದಕ್ಕೆ ಒಂದು ವಿಷಯವನ್ನು ವಿವರಿಸುತ್ತೇವೆ ನೋಡಿರಿ. ಈಗ ಇಲ್ಲಿ ಬೈಬಲ್ ವಿಷಯವನ್ನು ಉದಾಹರಣೆಯಾಗಿ ಹೇಳಬೇಕಾಗಿ ಬಂದಿದೆ. ಈ ವಿಷಯವನ್ನು ಹೇಳುವ ಮುಂಚೆ ನಾನು ವಿನಂತಿಸಿಕೊಳ್ಳುವುದು ಏನೆಂದರೆ! ನಾನು ಪೂರ್ತಿ ಇಂದೂ. ನಾನು ಹೇಳುವುದು ಇಂದೂಧರ್ಮಗಳು. ಇಂದೂ ಧರ್ಮಗಳನ್ನು ಬಲಪಡಿಸುವ ಉದಾಹರಣೆಗಳು ಎಲ್ಲಿದ್ದರು ಅವುಗಳನ್ನು ಎತ್ತಿ ತೋರಿಸುವುದು ನನ್ನ ಕರ್ತವ್ಯ. ಗತದಲ್ಲಿ ಇಂದೂಧರ್ಮಗಳ ದೊಡ್ಡತನವನ್ನು ಅಪಾರ್ಥ ಮಾಡಿಕೊಂಡ ಕ್ರೈಸ್ತರನ್ನು ನಾವು ವಿಮರ್ಶಿಸುತ್ತಾ, ಬೈಬಲ್‌ನಲ್ಲಿ ಪ್ರಭುವು ಹೇಳಿದ ಮಾತುಗಳು ನಿಮಗೆ ಇಲ್ಲಿಯವರೆಗೂ ಅರ್ಥವಾಗಲಿಲ್ಲವೆಂದು ಪ್ರಭುವಿನ ಮಾತುಗಳನ್ನು ಎತ್ತಿ ತೋರಿಸಿದ್ದೇವೆ. ಅಷ್ಟೇ ಅಲ್ಲದೆ ಪ್ರಭು ಬೋಧನೆಗಳಿಗೆ ವಿರುದ್ಧವಾದ ವಾಕ್ಯಗಳು ಬೈಬಲ್‌ನಲ್ಲಿ ಇವೆಯೆಂದು ಧೈರ್ಯವಾಗಿ ಹೇಳಿದ್ದೇವೆ. **"ಸೃಷ್ಟಿಕರ್ತ ಕೋಡ್ 963"** ಎನ್ನುವ ಸಣ್ಣ ಗ್ರಂಥದಲ್ಲಿ ಬೈಬಲಿನಲ್ಲಿನ ಆದಿಕಾಂಡವು ಅಸತ್ಯಗಳ ಹುತ್ತ ಎಂದು ಬರೆದಿದ್ದೇವೆ. ಆದರೆ ನಮ್ಮ ಉದ್ದೇಶವನ್ನು ತಿಳಿಯದ ಹಿಂದೂಗಳು ಕೆಲವರು, ನಮ್ಮನ್ನು ಪರಮತವನ್ನು ಬೋಧಿಸುವವರಾಗಿ ಹೇಳಿಕೊಂಡಿದ್ದಾರೆ. ಹಿಂದೂ ಧರ್ಮಗಳನ್ನು ತಿಳಿಯದವರು, ಹಿಂದೂಧರ್ಮ ಸಂಸ್ಥೆಗಳ ಹೆಸರಿನಿಂದ ಹಿಂದೂಮತವನ್ನು ಸರ್ವನಾಶ ಮಾಡುತ್ತಾ, ನಮ್ಮಂತಹವರನ್ನು ಸಹ ಕ್ರೈಸ್ತಮತಕ್ಕೆ ಸಂಬಂಧಿಸಿ ದವರಾಗಿ ಹೇಳಿಕೊಳ್ಳುವುದು, ಹಿಂದೂಗಳು ತಮ್ಮ ಬೆರಳಿನಿಂದ ತಮ್ಮ ಕಣ್ಣನ್ನು ತಾವೇ ಇರಿದುಕೊಂಡಂತೆ ಅಲ್ಲವೆ ಎಂದು ಕೇಳುತ್ತಿದ್ದೇನೆ. ನಾವು ಎಲ್ಲಿಯಾದರು

ಉದಾಹರಣೆಯಾಗಿ ಬೈಬಿಲ್ ವಿಷಯಗಳನ್ನು ಹೇಳಿದರೆ ನನ್ನನ್ನು ಕ್ರೈಸ್ತನೆಂದು, ಕ್ರೈಸ್ತ ಮತವನ್ನು ಪ್ರಚಾರ ಮಾಡುತ್ತಿದ್ದಾನೆಂದು ಅನ್ನುತ್ತಿದ್ದಾರೆ? ಹಿಂದೂಗಳು ಎಲ್ಲರೂ ಮುಖ್ಯವಾಗಿ ಹೇಳಿಕೊಳ್ಳುವ ವಿವೇಕಾನಂದನು ತನ್ನ ಜೀವನ ಚರಿತ್ರೆ ಪುಸ್ತಕದಲ್ಲಿ 17ನೇ ಪೇಜಿನಲ್ಲಿ **"ಯೇಸುಪ್ರಭುವಿನ ಕಾಲದಲ್ಲಿ ನಾನು ಇದ್ದಿದ್ದರೆ, ಆ ದಿನ ಆತನ(ಏಸು) ಪಾದಗಳನ್ನು ನನ್ನ ಕಣ್ಣೀರಿನಿಂದ ಅಲ್ಲದೆ, ನನ್ನ ಹೃದಯ ರಕ್ತದಿಂದ ತೊಳೆದು ಇರುತ್ತಿದ್ದೆ" ಎಂದು ಹೇಳಿದ್ದಾನೆ.** ಹಾಗೆ ಹೇಳಿದ ವಿವೇಕಾನಂದನು ಸಹ ಕ್ರೈಸ್ತ ಮತವನ್ನು ಪ್ರಚಾರ ಮಾಡಿದಂತೆನಾ? ನಾನು ಕ್ರೈಸ್ತರನ್ನು ಎಷ್ಟೋ ಪ್ರಶ್ನೆಗಳನ್ನು ಕೇಳಿದ್ದೇನೆ, ಎಷ್ಟೋ ಸಂದರ್ಭಗಳಲ್ಲಿ ಅವರ ಅಜ್ಞಾನವನ್ನು ಎತ್ತಿ ತೋರಿಸಿದ್ದೇನೆ. ನಾನು ಬರೆದ ಗ್ರಂಥಗಳನ್ನು ಓದದೆಯೇ, ನಾನು ಏನು ಹೇಳುತ್ತಿದ್ದೇನೆಂದು ತಿಳಿಯದೇ, ಅನಾಲೋಚಿತವಾಗಿ ಮಾತನಾಡು ವುದು ಒಳ್ಳೆಯದಲ್ಲವೆಂದು ಹಿಂದೂ ಸಂಸ್ಥೆಗಳೆಂದು ಹೆಸರಿಟ್ಟುಕೊಂಡವರಿಗೆ ತಿಳಿಸುತ್ತಿದ್ದೇವೆ. ಹಿಂದೂ ಧರ್ಮಗಳನ್ನು ತಿಳಿಸುತ್ತಿರುವವರನ್ನು, ಹಿಂದೂ ಧರ್ಮಗಳೆಂದರೆ ಏನೊ ತಿಳಿಯದವರು ಅನವಶ್ಯಕವಾಗಿ ವಿಮರ್ಶಿಸುವುದು ಒಳ್ಳೆಯದಲ್ಲ.

ಸನಾತನವಾದ ಹಿಂದೂ ಧರ್ಮಗಳೆಲ್ಲವೂ ಆಧ್ಯಾತ್ಮಿಕತೆಯ ಮೇಲೆ ಆಧಾರಪಟ್ಟಿವೆ. ಆಧ್ಯಾತ್ಮಿಕ ಒಂದು ಹಿಂದೂ (ಇಂದೂ) ಧರ್ಮಗಳಲ್ಲಿ ಹೊರತುಪಡಿಸಿ ಎಲ್ಲಿಯೂ ಇಲ್ಲ. ಅಂತಹ ಆಧ್ಯಾತ್ಮಿಕ ರಹಸ್ಯವಾದ ತಾತ್ಕಾಲಿಕ ಮರಣವನ್ನು ಕುರಿತು ಹಿಂದೂ ಆಧ್ಯಾತ್ಮಿಕ ಗುರುವಾದ ಮಾಸ್ಟರ್ C.V.V. ರಾಮನ್‌ರವರ ಉದಾಹರಣೆಯನ್ನು, ಬ್ರಹ್ಮವಿದ್ಯಾಶಾಸ್ತ್ರವನ್ನೆ ತಿಳಿಸಿದ ಶ್ರೀಕೃಷ್ಣನ ಉದಾಹರಣೆಯನ್ನು ಹೇಳಿದ್ದೇವೆ. ಹಾಗೆ ಬೈಬಿಲ್‌ನಲ್ಲಿನ ಉದಾಹರಣೆಯನ್ನು ಸಹ ಹೇಳುತ್ತಿದ್ದೇವೆ ನೋಡಿರಿ. ಮತ್ತಾಯಿ ಸುವಾರ್ತೆ 9ನೇ ಅಧ್ಯಾಯ 23,24,25 ವಾಕ್ಯಗಳು **"ಅಷ್ಟರಲ್ಲಿ ಯೇಸು ಆ ಅಧಿಕಾರಿ ಮನೆಗೆ ಬಂದು ಕೊಳಲನ್ನು ಊದುವವರನ್ನು, ಗಲಾಟೆ ಮಾಡುತ್ತಿರುವ ಜನ ಸಮೂಹವನ್ನು ನೋಡಿ "ಸ್ಥಳಬಿಡಿ ಈ ಹುಡುಗಿ ನಿದ್ರಿಸುತ್ತಿದ್ದಾಳೆ**

**ಆದರೆ ಸತ್ತುಹೋಗ ಲಿಲ್ಲ ವೆಂದು" ಅವರ ಹತ್ತಿರ ಹೇಳಿದ ಕೂಡಲೆ ಅವರು ಆತನನ್ನು ಅಪಹಾಸ್ಯ ಮಾಡಿದರು. ಜನ ಸಮೂಹವನ್ನು ಕಳುಹಿಸಿ, ಆತನು ಒಳಗೆಹೋಗಿ ಆಕೆಯ ಕೈಯಿ ಹಿಡಿದುಕೊಳ್ಳುತ್ತಲೇ ಆ ಹುಡುಗಿ ಎದ್ದಳು."**

ತಾತ್ಕಾಲಿಕ ಮರಣವನ್ನು ಹೊಂದಿದವರು ನಿದ್ರಾವಸ್ಥೆಯಲ್ಲಿ ಇರುತ್ತಾರೆಂದು ನಾವು ಮೊದಲೆ ಹೇಳಿಕೊಂಡಂತೆ, ಯೇಸು ಸಹ ಆಕೆ ನಿದ್ರೆಮಾಡುತ್ತಿದ್ದಾಳೆ ಸತ್ತುಹೋಗಲಿಲ್ಲ ಎಂದು ಹೇಳಿದನು. ಅಲ್ಲಿನ ಪ್ರಜೆಗಳೆಲ್ಲರೂ ಸತ್ತುಹೋಗಿದ್ದಾಳೆ ಎಂದು ಹೇಳಿದ ಆ ಯುವತಿಯನ್ನು ನೋಡಿ, ಆಕೆ ಮರಣಿಸಲಿಲ್ಲ ನಿದ್ರೆ ಮಾಡುತ್ತಿದ್ದಾಳೆ ಎಂದು ಹೇಳುವುದರಿಂದ, ಆ ಯುವತಿ ಹೊಂದಿರುವುದು ತಾತ್ಕಾಲಿಕ ಮರಣವೆಂದು ನಮಗೆ ಅರ್ಥವಾಗುತ್ತದೆ. ಮೇಲಾಗಿ ಏಸುವೇ ಆಕೆ ಮರಣಿಸಲಿಲ್ಲವೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಆದರೂ ಇಲ್ಲಿಯವರೆಗೂ ತಾತ್ಕಾಲಿಕ ಮರಣ ಎನ್ನುವುದು ಒಂದಿದೆಯೆಂದು ಕ್ರೈಸ್ತರು ಗ್ರಹಿಸಲಾರದೆ ಹೋಗಿದ್ದಾರೆ. ಆಕೆ ಸತ್ತುಹೋಗಲಿಲ್ಲವೆಂದು ಹೇಳಿದ ಯೇಸು ಮಾತನ್ನು ಗಾಳಿಗೆ ಬಿಟ್ಟು, ಯೇಸು ಸತ್ತುಹೋದ ಮನುಷ್ಯನನ್ನು ಬದುಕಿಸಿದ್ದಾನೆಂದು ಹೇಳಿಕೊಳ್ಳುವುದು ತಪ್ಪಲ್ಲವೆ? ಯೇಸು ಸತ್ತುಹೋಗಲಿಲ್ಲ ಎಂದು ಹೇಳಿದರೂ ಸತ್ತುಹೋದ ವ್ಯಕ್ತಿಯನ್ನು ಎಬ್ಬಿಸಿದಂತೆ ಹೇಳಿಕೊಳ್ಳುವುದರಿಂದ ಯೇಸು ಮಾತಿನ ಬಗ್ಗೆ ಅವರು ತಲೆಕೆಡಿಸಿ ಕೊಳ್ಳಲಿಲ್ಲವೆಂದು ಅರ್ಥವಾಗುತ್ತದೆ. ಯೇಸು ಬದುಕಿರುವಾಗ ಹೇಳಿದ ಮಾತನ್ನು ಇದು ದೊಡ್ಡ ರಹಸ್ಯವೆಂದು ಗ್ರಹಿಸದವರು, ಯೇಸುವೆ ಸ್ವತಃ ತಾತ್ಕಾಲಿಕ ಮರಣವನ್ನು ಹೊಂದಿದಾಗ, ಯೇಸುವನ್ನು ಸತ್ತುಹೋಗಿದ್ದಾನೆಂದು ಹೇಳುವುದು ತಪ್ಪು ತಾನೆ? ಯೇಸು ಶುಕ್ರವಾರ ಮಧ್ಯಾಹ್ನ ಮೂರು ಗಂಟೆಗಳಿಗೆ ತಾತ್ಕಾಲಿಕವಾಗಿ ಸತ್ತುಹೋಗಿ, ಶನಿವಾರವೆಲ್ಲವೂ ನಿದ್ರೆಮಾಡಿ ವಿಶ್ರಾಂತಿ ತೆಗೆದುಕೊಂಡು, ಭಾನುವಾರ ಮುಂಜಾನೆ ಆರು ಗಂಟೆಗೆ ಎದ್ದರೆ, ಆತನು ಮರಣವನ್ನು ಜಯಿಸಿದ್ದಾನೆಂದು ಕೆಲವರು ಹೇಳುವುದು, ಇರುವ

ವಾಸ್ತವವನ್ನು ಮುಚ್ಚಿಟ್ಟು ಯೇಸುವನ್ನೂ ಸಹ ತಪ್ಪಾಗಿ ಚಿತ್ರಿಸಿದಂತೆ ಅಲ್ಲವೆ? ಎಂದು ಕೇಳುತ್ತಿದ್ದೇನೆ.

ಪೂರ್ವಕಾಲದಲ್ಲಿ ಇಂದೂ (ಹಿಂದೂ) ಧರ್ಮಗಳಿಂದ ಕೂಡಿಕೊಂಡ ಆಧ್ಯಾತ್ಮಿಕತೆಯನ್ನು ತಿಳಿದವರು, ಮರಣಗಳೆಲ್ಲವೂ ಸಾಧಾರಣ ಮರಣಗಳು ಅಲ್ಲವೆಂದು, ಅದರಲ್ಲಿ ಕಾಲ ಮರಣ, ಅಕಾಲ ಮರಣ, ತಾತ್ಕಾಲಿಕ ಮರಣಗಳೆಂದು ಮೂರು ವಿಧಗಳು ಇವೆಯೆಂದು ತಿಳಿದಿದ್ದಾರೆ. ಹಾಗೆ ಅವರು ತಿಳಿದಿರುವುದೆ ಅಲ್ಲದೆ ಮೂರನೆ ವಿಧದ ಮರಣ ಹೊಂದಿದವರನ್ನು ಗುರುತಿಸಿದ್ದಾರೆ. ಗುರುತಿಸುವುದೇ ಅಲ್ಲದೆ ಅವರಿಗೆ ತಿಳಿದ ಪದ್ದತಿ ಪ್ರಕಾರ ತಾತ್ಕಾಲಿಕ ಮರಣದಿಂದ ಎಬ್ಬಿಸಿದ್ದಾರೆ. ಅಂತಹವರಲ್ಲಿ ಎಲ್ಲರಿಗಿಂತ ಮುಂಚೆ 5200 ವರ್ಷಗಳ ಪೂರ್ವದಲ್ಲಿಯೇ, ಸತ್ತುಹೋಗಿದ್ದಾನೆಂದುಕೊಂಡ ಸಾಂದೀಪನ ಮಗನನ್ನು ಶ್ರೀಕೃಷ್ಣನು ಪುನಃ ನಿದ್ರೆಯಿಂದ ಎಚ್ಚರಿಸಿದಂತೆ ಎಬ್ಬಿಸಿ ತೋರಿಸಿದ್ದಾನೆ. ಇದರಿಂದ ನಮಗೆ ದ್ವಾಪರಯುಗದಲ್ಲಿಯೆ ತಾತ್ಕಾಲಿಕ ಮರಣವನ್ನು ಹೊಂದಿದವರಿದ್ದಾರೆಂದು, ಆ ಕಾಲದಲ್ಲಿಯೇ ಶ್ರೀಕೃಷ್ಣನು ಆ ಮೂರನೆ ಮರಣದಿಂದ ಆತನ ಗುರುವಿನ ಮಗನನ್ನು ಎಬ್ಬಿಸಿ ತೋರಿಸಿದ್ದಾನೆಂದು ತಿಳಿಯುತ್ತಿದೆ. ಮಾನವರಿಗೆ ಆಧ್ಯಾತ್ಮಿಕ ವಿದ್ಯೆಯನ್ನು ಶಾಸ್ತ್ರಬದ್ಧವಾಗಿ ತಿಳಿಸಿದವನು ಶ್ರೀಕೃಷ್ಣನು. ಆದ್ದರಿಂದ ಆತನೇ ಆಧ್ಯಾತ್ಮಿಕ ರಹಸ್ಯವಾದ ಮೂರನೆ ಮರಣವನ್ನು ಕುರಿತು ಮೊದಲೇ ನಮಗೆ ಅರ್ಥವಾಗುವಂತೆ ಮಾಡಿದ್ದಾನೆ. ಆದರೆ ಭಗವಂತನಾದ ಶ್ರೀಕೃಷ್ಣನು ಅಷ್ಟು ದೊಡ್ಡ ಮರಣ ವಿಷಯವನ್ನು ನಾವು ಗ್ರಹಿಸಿಕೊಳ್ಳುವಂತೆ ಮಾಡಿ ತೋರಿಸಿದರೂ, ಅದನ್ನು ಯಾರು ಅರ್ಥಮಾಡಿಕೊಂಡಿಲ್ಲ. ಇದೊಂದು ಆಧ್ಯಾತ್ಮಿಕ ರಹಸ್ಯವೆಂದು ಯಾರು ಅಂದುಕೊಳ್ಳದಂತೆ ಇರುವುದಲ್ಲದೆ, ಆತನು ಮಾಡಿ ತೋರಿಸಿರುವುದನ್ನು ಮಹತ್ವದ ಕೆಳಗೆ ಜಮಕಟ್ಟಿದ್ದಾರೆ. ಅಂದಿನಿಂದ ಯಾರು ತಾತ್ಕಾಲಿಕ ಮರಣವನ್ನು ಛೇದಿಸಿದರೂ, ಅವರು ದೊಡ್ಡವರು, ಅವರು ಹಾಗೆ ಮಾಡಿದ್ದಾರೆ ಎಂದು ಅನ್ನುತ್ತಿದ್ದಾರೆ. ನಮಗೆ ಈ ವಿಷಯ ಆಧ್ಯಾತ್ಮಿಕ ಧರ್ಮವನ್ನೂ, ಶರೀರದಲ್ಲಿ ಆತ್ಮದ ಕೆಲಸವನ್ನು ತಿಳಿಸುತ್ತದೆ ಎಂದು ಯಾರು ಅಂದುಕೊಂಡಿಲ್ಲ. ತಾತ್ಕಾಲಿಕ ಮರಣವನ್ನು ಹೊಂದಿದ

ವ್ಯಕ್ತಿಯನ್ನು ಕುರಿತು ಈತನು ಮರಣಿಸಲಿಲ್ಲ, ನಿದ್ರೆಮಾಡುತ್ತಿದ್ದಾನೆಂದು ಎರಡು ಸಾವಿರ ವರ್ಷಗಳ ಪೂರ್ವಕಾಲದಲ್ಲಿಯೇ ಯೇಸುಪ್ರಭುವು ಹೇಳಿ, ಎಲ್ಲರೂ ಸತ್ತುಹೋಗಿದ್ದಾನೆಂದುಕೊಂಡವನನ್ನು ಕರೆದಾಗ ಎಚ್ಚರಗೊಂಡವರು, ಕೈಯಿಂದ ತಟ್ಟಿ ಕರೆದಾಗ ಎಚ್ಚರಗೊಂಡವರೂ ಇದ್ದಾರೆ. ಆದರೆ ಹಾಗೆ ಬದುಕಿಸಿದವರು ಸತ್ತುಹೋದವನನ್ನು ಎಬ್ಬಿಸುತ್ತಿದ್ದೇನೆಂದು ಎಲ್ಲಿಯೂ ಹೇಳಲಿಲ್ಲ. ಅವರು ಎಬ್ಬಿಸುವುದಕ್ಕಿಂತ ಮೊದಲೇ ಈತನು ನಿದ್ರಿಸುತ್ತಿದ್ದಾನೆಂದು ಹೇಳಿ ಎಬ್ಬಿಸಿದ್ದಾರೆ. ಬೈಬಿಲ್‌ನಲ್ಲಿ ಎರಡು ಕಡೆ ಎಲ್ಲರೂ ಮರಣಿಸಿದ್ದಾನೆಂದು ಕೊಂಡವವನನ್ನು ಎಬ್ಬಿಸಿದಾಗ, ಈಕೆ ನಿದ್ರಿಸುತ್ತಿದ್ದಾಳೆಂದು ಒಂದುಕಡೆ ಹೇಳಿ ಎಬ್ಬಿಸುವುದು ನಡೆದಿದೆ. ಹಾಗೆಯೇ ಮತ್ತೊಂದು ಕಡೆ ಲಾಜರು ನಿದ್ರಿಸುತ್ತಿದ್ದಾನೆಂದು ಹೇಳಿ ಎಬ್ಬಿಸುವುದು ನಡೆದಿದೆ. ಅಷ್ಟೆಲ್ಲಾ ಹೇಳಿದರೂ ಪ್ರಭುವು ಮಾತುಗಳನ್ನು ಯಾವ ಕ್ರೈಸ್ತನು ಲೆಕ್ಕಿಸಲಿಲ್ಲ. ಏಸು ಸತ್ತುಹೋದವನನ್ನು ಎಬ್ಬಿಸಿದ್ದಾನೆಂದು ಹೇಳುತ್ತಾ, ಏಸು ಮಾತನ್ನು ಸಹ ಅಸತ್ಯ ಮಾಡುತ್ತಿದ್ದಾರೆ. ಅಷ್ಟೇ ಅಲ್ಲದೆ ಯೇಸುವೆ ಸ್ವತಃ ಮೂರನೆ ಮರಣವನ್ನು ಹೊಂದಿ, ಒಂದುದಿನ ಪೂರ್ತಿ ನಿದ್ರೆಮಾಡಿ ವಿಶ್ರಾಂತಿ ತೆಗೆದುಕೊಂಡು, ಮೂರನೆ ದಿನ ಎದ್ದರೆ ಏಸು ಮರಣದಿಂದ ಎದ್ದಿದ್ದಾನೆಂದು ಕ್ರೈಸ್ತರೇ ಪ್ರಚಾರ ಮಾಡಿದ್ದಾರೆ. ಈ ಮಾತನ್ನು ಯೇಸುಪ್ರಭೂ ಸಹ ಒಪ್ಪಿಕೊಳ್ಳುವುದಿಲ್ಲ. ಆದ್ದರಿಂದ ಏಸು ಹೇಳಿದ ಜ್ಞಾನವಾಗಲಿ, ಆತನು ಮಾಡಿದ ಕೆಲಸಗಳಾಗಲಿ ಇಲ್ಲಿಯವರೆಗೂ ಕ್ರೈಸ್ತರಿಗೆ ಅರ್ಥವಾಗಲಿಲ್ಲವೆಂದು ಹೇಳುತ್ತಿದ್ದೇವೆ. ನಾನು ಹೇಳುವುದೇ ಅಲ್ಲ, ಸ್ವತಃ ಯೇಸುಪ್ರಭುವು ಸಹ ನನ್ನ ಮಾತುಗಳನ್ನು ಆದರಣಕರ್ತ ಬಂದು ಹೇಳುವವರೆಗೂ ಅರ್ಥವಾಗುವುದಿಲ್ಲ ಎಂದು ಹೇಳಿ ಹೋಗಿದ್ದಾನೆ. ಯೇಸು ಕ್ರೈಸ್ತವರಿಗೆ ಪ್ರವಕ್ತನಾಗಿರುವಾಗಲೂ ಆತನ ಕಾಲ ಮರಣವು ಯಾವಾಗ ನಡೆದಿರುವುದು, ಎಲ್ಲಿ ನಡೆದಿರುವುದು ಯಾರಿಗೂ ತಿಳಿದಿಲ್ಲ. ಆತನ ಜೀವನದಲ್ಲಿ ಒಂದೇ ಒಂದು ತಾತ್ಕಾಲಿಕ ಮರಣ ಮಾತ್ರ ನಮಗೆ ತಿಳಿದಿದೆ. ಯೇಸನ್ನು ಕುರಿತು ನಮಗೆ ತಿಳಿದಷ್ಟು ಸಹ ಕ್ರೈಸ್ತರಿಗೆ ತಿಳಿದಿಲ್ಲವೆಂದು ಹೇಳಬಹುದು.



# ಶ್ರೀಕೃಷ್ಣನು ಹೊಂದಿದ ಮರಣವು ಯಾವುದು?

ಇಂದೂಗಳಿಗೆ (ಹಿಂದೂಗಳಿಗೆ) ಧರ್ಮಗಳನ್ನು ತಿಳಿಸಿದ ಮುಖ್ಯವಾದ ಪ್ರವಕ್ತ ಶ್ರೀಕೃಷ್ಣನು. ಕೃಷ್ಣನು ಮಾನವನಿಗೆ ಬೇಕಾದ ಧರ್ಮಗಳೆಲ್ಲವನ್ನು ಬೋಧಿಸಿದ ಭಗವಂತನು. ಆತನು ತನ್ನ ಜೀವನದಲ್ಲಿ ಒಂದುಬಾರಿ ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆ. ತಾತ್ಕಾಲಿಕ ಮರಣ ಇಂತಹದೆಂದು ತಿಳಿಸುವ ನಿಮಿತ್ತ ಆ ಮರಣವನ್ನು ಆತನು ಹೊಂದಿದ್ದಾನೆ. ಮೂರನೆಯದಾದ ತಾತ್ಕಾಲಿಕ ಮರಣವನ್ನು ಕೃಷ್ಣನು ಹೊಂದುವ ಅವಶ್ಯಕತೆ ಇಲ್ಲದಿದ್ದರೂ, ಅದನ್ನು ಆತನು ಅನುಭವಿಸಿದ್ದಾನೆಂಬ ಗುರ್ತಿಗಾಗಿ ಚಿಕ್ಕ ವಯಸ್ಸಿನಲ್ಲಿಯೇ ಆ ಮರಣವನ್ನು ಹೊಂದಿದ್ದಾನೆ. ಆ ವಿಧವಾಗಿ ಆತನು ಹೊಂದಿರುವುದರಿಂದ ಅದು ಆತನಿಗೆ ತಿಳಿದಿಲ್ಲ ಎಂಬುವುದಕ್ಕೆ ಯಾರಿಗೂ ಸಾಧ್ಯವಿಲ್ಲ. ನನಗೆ ತಿಳಿದಿರುವವರೆಗೂ ಚರಿತ್ರೆಯಲ್ಲಿ 5200 ವರ್ಷಗಳ ಪೂರ್ವಕಾಲದಲ್ಲಿ ಕೃಷ್ಣನು ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆ. ಹಾಗೇ ಆ ಮರಣದಿಂದ ಸಾಂದೀಪನ ಮಗನನ್ನು ಎಬ್ಬಿಸಿದ್ದಾನೆ. ಕೃಷ್ಣನು 120 ವರ್ಷಗಳು ಬದುಕಿ ಕೊನೆಯಲ್ಲಿ ಕಾಲಮರಣವನ್ನು ಹೊಂದಿದ್ದಾನೆ. ಅದಕ್ಕು ಮೊದಲು ತನ್ನ ಚಿಕ್ಕ ವಯಸ್ಸಿನಲ್ಲಿಯೆ, ನಂದಗಾವ್‌ನಲ್ಲಿ ಕಾಳಿಂಗ ಮಡುಗಿನಲ್ಲಿ ಸರ್ಪ ಕಡಿತಕ್ಕೆ ಗುರಿಯಾಗಿದ್ದಾನೆ. ಸರ್ಪದ ವಿಷ ಕೋರೆಗಳು ರಕ್ತನಾಳಕ್ಕೆ ಇಳಿಯುವುದರಿಂದ, ಎರಡು ನಿಮಿಷಗಳಲ್ಲಿ ವಿಷವು ಮೆದಳಿಗೆ ಸೇರುವುದರಿಂದ ಕೃಷ್ಣನು ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆ. ಆ ಮರಣವನ್ನು ಹೊಂದಿದ ಕೃಷ್ಣನು ಕೇವಲ ಹತ್ತು ನಿಮಿಷಗಳು ಮಾತ್ರ ಮರಣಿಸಿದ್ದಾನೆ. ತಾತ್ಕಾಲಿಕ ಮರಣವನ್ನು ಹೊಂದಿದ ಕೃಷ್ಣನು ಅದರಲ್ಲಿ ಹತ್ತು ನಿಮಿಷಗಳಿದ್ದು ಪುನಃ ಎದ್ದಿದ್ದಾನೆ. ಆ ಮರಣದಲ್ಲಿರುವ ಹತ್ತು ನಿಮಿಷಗಳು ಕೃಷ್ಣನು ನಿದ್ರಾಸ್ಥಿತಿಯನ್ನು ಹೊಂದಿ ನಂತರ ಏಳುವುದು ನಡೆದಿದೆ.

ಕೃಷ್ಣನು ಹಾವಿನ ಕಡಿತಕ್ಕೆ ಗುರಿಯಾಗುವುದೇನು? ಆತನು ತಾತ್ಕಾಲಿಕ ಮರಣವನ್ನು ಹೊಂದುವುದೇನು? ಎಂದು ಎಲ್ಲರಿಗೂ ಆಶ್ಚರ್ಯ ಉಂಟಾಗ ಬಹುದು. ಈ ವಿಧವಾಗಿ ನಡೆದಿದೆ ಎಂದು ಭಾರತದಲ್ಲಾಗಲಿ, ಭಾಗವತದಲ್ಲಾಗಲಿ

ಇಲ್ಲವೆ ಎಂದು ಕೇಳಬಹುದು. ಬರೆಯುವ ವ್ಯಕ್ತಿಗೆ ಮತಿಭ್ರಮಿಸಿ ಇಷ್ಟಬಂದಂತೆ ಬರೆದಿದ್ದಾನೆಂದು ನನ್ನನ್ನು ದೂಷಿಸಬಹುದು. ಯಾವ ಆಧಾರವಿಲ್ಲದ್ದು ಹೇಗೆ ಬರೆದಿದ್ದಾರೆಂದು ಪ್ರಶ್ನಿಸಬಹುದು. ಅಷ್ಟೇ ಅಲ್ಲದೆ ಈ ವಿಷಯವನ್ನು ಯಾರು ನಂಬುವುದಿಲ್ಲವೆಂದು ಸಹ ನನಗೆ ಚೆನ್ನಾಗಿ ತಿಳಿದಿದೆ. ಆದರೂ ಇದು ಸತ್ಯ ಎಂದು ತಿಳಿಸುತ್ತಾ ಬರೆಯುತ್ತಿದ್ದೇನೆ. ಎಲ್ಲಾರ ಪ್ರಶ್ನೆಗಳಿಗೆ ನಾನು ಒಂದೇ ಉತ್ತರವನ್ನು ಹೇಳುತ್ತೇನೆ. ನಾನು ಆ ದಿನ ನೋಡಿದ್ದೇನೆ, ಈ ದಿನ ಹೇಳುತ್ತಿದ್ದೇನೆ. ನಾನು ಆ ದಿನ ನಡೆದ ವಿಷಯವನ್ನು ನೋಡಲಿಲ್ಲ ಎನ್ನುವುದಕ್ಕೆ ನಿಮ್ಮ ಹತ್ತಿರ ಆಧಾರ ಏನಾದರು ಇದೆಯಾ? ಎಂದು ನಾನು ಕೇಳಿದರೆ ನೀವು ಯಾವ ಆಧಾರವನ್ನು ತೋರಿಸಲಾರರು.

ನಿಮಗೆ ಇನ್ನೂ ಆಶ್ಚರ್ಯವನ್ನು ಉಂಟುಮಾಡುವ ವಿಷಯವನ್ನು ತಿಳಿಸುತ್ತೇನೆ. ನೀವು ನಂಬಿದರು ನಂಬದಿದ್ದರು ಹೇಳುವ ವಿಷಯ ನೂರಕ್ಕೆ ನೂರರಷ್ಟು ಸತ್ಯ. ಹಾಗೆಂದು ನಾನು ಯಾರನ್ನು ನಂಬಿಸಬೇಕಾದ ಅವಶ್ಯ ಕತೆಯಿಲ್ಲ. ಯಾರು ನಂಬಿದರು, ಯಾರು ನಂಬದಿದ್ದರು ನನಗೆ ನಷ್ಟವಿಲ್ಲ, ಹಾಗೆಯೇ ಲಾಭವು ಇಲ್ಲ. ಒಂದು ವಿಧವಾಗಿ ನನಗೆ ತಿಳಿದ ಸತ್ಯವನ್ನು ಹೇಳುವುದು ನನ್ನ ಕರ್ತವ್ಯ. ಆದ್ದರಿಂದ ಹೇಳುತ್ತಿದ್ದೇನೆ. ಚಿಕ್ಕಂದಿನಲ್ಲಿ ಕಾಳಿಂಗ ಮಡುಗಿನ ಹತ್ತಿರ ಹಾವಿನ ಕಡಿತಕ್ಕೆ ಗುರಿಯಾದ ಕೃಷ್ಣನು ಸುಮಾರು ಹತ್ತು ನಿಮಿಷಗಳ ಕಾಲ ಮೂರನೆ ತರಗತಿಗೆ ಸೇರಿದ ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆಂದು ಹೇಳುವುದಲ್ಲದೆ, ಆ ದಿನ ಕಚ್ಚಿದ ನಾಗರಹಾವು ಒಂದು ತಲೆ ಇರುವುದೆ ಎಂದು, ಫೋಟೋದಲ್ಲಿ ತೋರಿಸುವಂತೆ ಹತ್ತು ತಲೆಗಳ ಹಾವು ಅಲ್ಲವೆಂದು ಸಹ ತಿಳಿಸುತ್ತಿದ್ದೇವೆ. ಅಷ್ಟೇ ಅಲ್ಲದೆ ಕೃಷ್ಣನ ಎಡಗಾಲಿನ ಮೊಣಕಾಲಿನ ಪಿಕ್ಕ ಕಂಡದ ಮೇಲೆ ಹಾವು ಕಚ್ಚಿದೆ ಎಂದು ಸಹ ಹೇಳುತ್ತಿದ್ದೇವೆ. ಸಾಧಾರಣವಾಗಿ ನಾಗರಹಾವು ಒಂದು ಅಡಿ ಇಲ್ಲವೆ ಒಂದುವರೆ ಅಡಿ ಎತ್ತರಕ್ಕಿಂತ ತಲೆಯನ್ನು ಮೇಲಕ್ಕೆ ಎತ್ತಲಾರದು. ಆ ದಿನ ಕೃಷ್ಣನನ್ನು ಕಚ್ಚಿದ ನಾಗರಹಾವು ಅಡಿ ಎತ್ತರ ತಲೆಯನ್ನು ಎತ್ತಿ ಎಡಗಾಲಿಗೆ ಹಿಂಬದಿಯ ಪಿಕ್ಕ ಕಂಡಕ್ಕೆ ಕಚ್ಚಿದೆ.

ಕಾಲಿನ (ಪಿಕ್ಕ) ಕಂಡದೊಳಗಿನ ರಕ್ತನಾಳದೊಳಗೆ ಹಾವಿನ ಕೋರೆಗಳು ಇಳಿಯುವುದರಿಂದ, ಹಾವಿನ ವಿಷ ಎರಡು ನಿಮಿಷಗಳೊಳಗೆ ಶರೀರವೆಲ್ಲ ವ್ಯಾಪಿಸಿ ತಲೆಗೇರುವುದು ನಡೆದಿದೆ. ಆ ಸಮಯದಲ್ಲಿಯೇ ಕೃಷ್ಣನು ತಾತ್ಕಾಲಿಕ ಮರಣವನ್ನು ಹೊಂದುವುದು ಸಹ ನಡೆದಿದೆ. ನೀರಿನ ಮಡುಗಿನ ಹತ್ತಿರ ಮಡುಗಿನ ಹೊರಗೆ ಹಾವು ಕಚ್ಚುವುದು ನಡೆದಿದೆ. ಅಲ್ಲಿರುವ ಜೊತೆ ಹುಡುಗರೆಲ್ಲರೂ ಆ ವಿಷಯವನ್ನು ನೋಡಿದರು. ಕಚ್ಚಿದ ತಕ್ಷಣ ಹಾವು ಭಯದಿಂದ ನೀರಿನ ಮಡುಗಿನೊಳಗೆ ಹೋಗಿದೆ. ನಾಗರಹಾವು ನೀರಿನಲ್ಲಿ ಬಹಳ ಸಮಯ ಇರುವುದಿಲ್ಲ. ಆದ್ದರಿಂದ ಹದಿನೈದು ನಿಮಿಷಗಳ ನಂತರ ನೀರಿನಿಂದ ಹೊರಗೆ ಬಂದಿದೆ. ಅಷ್ಟರಲ್ಲಿ ಕೃಷ್ಣನು ಪುನಃ ಎದ್ದನು. ತನ್ನನ್ನು ಕಚ್ಚಿದ ಆ ಹಾವಿನ ಮೇಲೆ ಕೃಷ್ಣನಿಗೆ ಕೋಪ ಬಂದಿದೆ. ಹಾವು ಹೊರಗೆ ಬಂದ ತಕ್ಷಣ ಕೃಷ್ಣನು ಮತ್ತು ಅಲ್ಲಿರುವ ಎಲ್ಲರೂ ಸೇರಿ ಆ ಹಾವನ್ನು ಸಾಯಿಸಿದರು. ಅಷ್ಟೇ ಹೊರತು ಕಾಳಿಂಗ ಮಡುಗಿನಲ್ಲಿ ನಾಗರಾಜನೆಂದು, ನಾಗರಾಜನಿಗೆ ಇಬ್ಬರು ಹೆಂಡತಿಯರೆಂದು, ನಾಗರಾಜನಿಗೆ ಹತ್ತು ತಲೆಗಳೆಂದು ಹೇಳುವುದು ಪೂರ್ತಿ ಅಸತ್ಯ. ಈಗ ನಾವು ಹೇಳುವುದೇ ಪೂರ್ತಿ ಸತ್ಯ.

ಹಾವು ಕಚ್ಚಿದಾಗ ಕೃಷ್ಣನು ಸತ್ತುಹೋಗುವುದೇನು? ಪುನಃ ಬದುಕುವುದೇನು? ಎಂದೂ, ಸತ್ತುಹೋದವನು ಮತ್ತೆ ಬದುಕುತ್ತಾನಾ? ಎಂದೂ, ಇದೆಲ್ಲವೂ ನಂಬುವಂತಹ ವಿಷಯವೇನಾ ಎಂದೂ ಅನುಮಾನ ಬರಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ನಾಗರಹಾವು ಕಚ್ಚಿದರೆ ಯಾರಾದರು ಸತ್ತುಹೋದರು ಅದು ಕಾಲ ಮರಣವಲ್ಲ. ಹಾಗೆ ಸತ್ತುಹೋದರೂ ಅದು ಅಕಾಲ ಮರಣವೆಂದು ಸಹ ಹೇಳಲಾರೆವು. ನಾಗರಹಾವು ಕಚ್ಚಿದ ವ್ಯಕ್ತಿಗೆ ಶ್ವಾಸ ನಿಂತುಹೋಗಿ ಸತ್ತುಹೋದರೂ ಅದು ಪೂರ್ತಿ ಮರಣವಲ್ಲ. ನಾಗರಹಾವು ಕಚ್ಚಿದವನು ಯಾರು ಪೂರ್ತಿ ಕಾಲ ಮರಣವನ್ನು ಹೊಂದುವುದಿಲ್ಲ. ಆದರೆ ಶ್ವಾಸ ಶರೀರದೊಳಗೆ ನಿಂತುಹೋಗಿರುತ್ತದೆ. ಶ್ವಾಸ ಹೊರಗೆ ಹೋದರೇನೆ ಪೂರ್ತಿ ಮರಣ ಎಂದು ಮರಣ ಸಿದ್ಧಾಂತದಲ್ಲಿ ಹೇಳಿದ್ದೇವೆ. 1980 ವರ್ಷದಲ್ಲಿ

ನಾವು ರಚಿಸಿದ **"ಜನನ ಮರಣ ಸಿದ್ಧಾಂತ"** ಎಂಬ ಗ್ರಂಥದಲ್ಲಿ ಕಾಲ ಮರಣವನ್ನು ಕುರಿತು ಪೂರ್ತಿಯಾಗಿ ಹೇಳಿದ್ದೇವೆ. ಅಕಾಲ ಮರಣವನ್ನು ಕುರಿತು **"ದೆವ್ವಗಳ–ಭೂತಗಳ ಯಥಾರ್ಥ (ನೈಜ) ಸಂಘಟನೆಗಳು"** ಎಂಬ ಗ್ರಂಥದಲ್ಲಿ ಹೇಳಿದ್ದೇವೆ. ಈಗ ತಾತ್ಕಾಲಿಕ ಮರಣವನ್ನು ಕುರಿತು **"ಮರಣ ರಹಸ್ಯ"** ಎಂಬ ಈ ಗ್ರಂಥದಲ್ಲಿ ಹೇಳುತ್ತಿದ್ದೇವೆ. ನಾಗರಹಾವು ಕಚ್ಚಿದಾಗ ಸತ್ತುಹೋದವನು ಹೊರಗೆ ಕಾಣಿಸುವುದಕ್ಕೆ ಮಾತ್ರವೆ ಸತ್ತುಹೋಗಿದ್ದಾನೆಂದು ತಿಳಿಯಬೇಕು. ಹಾಗೆ ಸತ್ತುಹೋದವನು ಅವನ ಶರೀರದೊಳಗೆ ಬದುಕಿದ್ದಾನೆಂದು ತಿಳಿಯಬೇಕು. ಅಂತಹವನು ಕೆಲವು ಗಂಟೆಗಳು, ಕೆಲವು ದಿನಗಳವರೆಗಾದರು ನಿದ್ರೆಯಲ್ಲಿಯೇ ಇರುತ್ತಾನೆ. ತಾತ್ಕಾಲಿಕ ಮರಣವನ್ನು ಹೊಂದಿದವನನ್ನು, ಯಾರಾದರು ಹಾವಿನ ವಿಷಕ್ಕೆ ವೈದ್ಯ ತಿಳಿದವರು ಅವನ ಶರೀರಕ್ಕೆ ವೈದ್ಯ ಮಾಡಿ, ವಿಷವನ್ನು ತೊಲಗಿಸಿ ಅವನನ್ನು ಪುನಃ ಬದುಕಿಸಬಹುದು. ಇದರಿಂದ ನಾಗರಹಾವು ಕಚ್ಚಿರುವುದರಿಂದ ಸತ್ತುಹೋದವನು ಪೂರ್ತಿ ಮರಣಿಸುವುದಿಲ್ಲವೆಂದು ತಿಳಿಯುತ್ತದೆ.

ದ್ವಾಪರಯುಗದಲ್ಲಿ ಕೃಷ್ಣನನ್ನು ಕಚ್ಚಿರುವುದು ಸಹ ನಾಗರಹಾವೆಂದು, ಆದ್ದರಿಂದ ಕೃಷ್ಣನು ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆಂದು, ಪುನಃ ತನಗೆ ತಾನೇ ಎದ್ದಿದ್ದಾನೆಂದು ಹೇಳಿದ್ದೇವೆ. ಚಿಕ್ಕಂದಿನಲ್ಲಿನ ಹಾವಿನ ಕೋರೆಗಳ ಕಾಟುಗಳು ಆತನ ಎಡಗಾಲಿನ ಮೇಲೆ ಸಣ್ಣ ಗುರ್ತುಗಳಾಗಿ ಇದ್ದುಹೋಗಿವೆ. ಕೃಷ್ಣನ ವಿಷಯದಲ್ಲಿ ಇಲ್ಲಿಯವರೆಗು ಯಾರಿಗೂ ತಿಳಿಯದ ರಹಸ್ಯವು ಹಾವಿನ ಕಾಟುಗಳೆಂದು ಹೇಳಬಹುದು. ಇವೆಲ್ಲವೂ ನಾವು ಹೇಗೆ ನಂಬುವುದು ಎಂದು ಯಾರೂ ಅಂದುಕೊಳ್ಳದೆ, ಹಾವಿನ ಕಾಟುಗಳ ಗುರಿತಿಗೆ ಸಂಬಂಧಿಸಿದ ರಹಸ್ಯ ಮತ್ತೊಂದು ಇದೆ. ಕೃಷ್ಣನು ಭಗವಂತನೆಂದು, ದೈವಾಂಶದಿಂದ ಹುಟ್ಟಿದವನೆಂದು **"ಶ್ರೀ ಕೃಷ್ಣನು ದೇವರಾ–ಭಗವಂತನಾ"** ಎಂಬ ಗ್ರಂಥದಲ್ಲಿ ಬರೆದುಕೊಂಡಿದ್ದೇವೆ. ಆ ಗ್ರಂಥದಲ್ಲಿಯೆ ಕೃಷ್ಣನು ಇನ್ನೂ ಎರಡು ಸಲ ಹುಟ್ಟುತ್ತಾನೆಂದು, ಆತನು ಒಟ್ಟು ಮೂರುಬಾರಿ ಭೂಮಿ ಮೇಲೆ ಬಂದು ಹೋಗುತ್ತಾನೆಂದು ಹೇಳಿ ಕೊಂಡಿದ್ದೇವೆ. ಅಷ್ಟೇ ಅಲ್ಲದೆ ಈಗಾಗಲೇ ಎರಡನೆಬಾರಿ ಬಂದುಹೋಗಿದ್ದಾ

ನೆಂದು ಬರೆದುಕೊಂಡಿದ್ದೇವೆ. ಇನ್ನು ಮೂರನೆ ಜನ್ಮವೂ ಸಹ ಬಂದು ಹೋಗುತ್ತದೆಂದು ಹೇಳಿಕೊಂಡಿದ್ದೇವೆ. ಕೃಷ್ಣನು ಎರಡನೆ ಸಲ ಬಂದಾಗ, ಆತನ ಮೊದಲ ಜನ್ಮವಾದ ಕೃಷ್ಣಾವತಾರದಲ್ಲಿ ಎಡಗಾಲಿಗಿರುವ ಹಾವು ಕಚ್ಚಿದ ಗುರ್ತುಗಳು, ಎರಡನೆ ಅವತಾರದಲ್ಲಿ ಧರಿಸಿದ ಶರೀರಕ್ಕೂ ಸಹ ಇರುವುದು ವಿಶೇಷ. ಎರಡನೆಬಾರಿ ಧರಿಸಿದ ಶರೀರಕ್ಕೂ ಅದೇ ಎಡಗಾಲಿಗೆ, ಅದೇ ಸ್ಥಳದಲ್ಲಿ ಹಾವು ಕಚ್ಚಿದ ಗುರ್ತುಗಳಿರುವುದು ದೊಡ್ಡ ಪ್ರತ್ಯೇಕತೆ ಎಂದು ತಿಳಿಯಬೇಕು. ಹಾಗೆ ಏಕಿವೆಯೆಂದರೆ! ಕೃಷ್ಣನೆ ಈಗ ಈ ಮನುಷ್ಯನಾಗಿ ಹುಟ್ಟಿದ್ದಾನೆಂದು ಗುರುತಿಸುವುದಕ್ಕೆ ಆಧಾರವಾಗಿ, ಹಾವು ಕಚ್ಚಿದ ಗುರ್ತುಗಳು ಎರಡನೆ ಜನ್ಮದಲ್ಲಿಯೂ ಸಹ ಬಂದಿವೆ ಎಂದು ನಾವು ಎಂದುಕೊಳ್ಳುತ್ತಿದ್ದೇವೆ. ಮೊದಲನೆ ಜನ್ಮಕ್ಕೂ, ಎರಡನೆ ಜನ್ಮಕ್ಕೂ ಮೂರು ಸಾವಿರ ವರ್ಷಗಳು ಅವಧಿ ಇದ್ದರೂ, ಎರಡನೆ ಜನ್ಮದಲ್ಲಿಯೂ ಸಹ ಶರೀರದ ಮೇಲೆ ಹಾವು ಕಚ್ಚಿದ ಗುರ್ತುಗಳು ಬರುವುದು ದೊಡ್ಡ ವಿಶೇಷವೇ ಆದರೂ, ಆ ಗುರುತುಗಳ ವಿಷಯ ಕೃಷ್ಣನ ಜನ್ಮದಲ್ಲಾಗಲಿ, ನಂತರ ಜನ್ಮದಲ್ಲಾಗಲಿ ಯಾರಿಗೂ ತಿಳಿಯದಂತೆ ಹೋಗಿವೆ.

ಎರಡನೆ ಜನ್ಮದಲ್ಲಿ ಒಬ್ಬ ಭಕ್ತಳು ಆತನ ಕಾಲುಗಳನ್ನು ಒತ್ತುತ್ತಾ ಒಂದಕ್ಕೊಂದು ಪಕ್ಕಪಕ್ಕದಲ್ಲಿಯೇ ಇರುವ ಸೂಜಿ ಮಂದವಿರುವ ಎರಡು ಮಚ್ಚೆಗಳನ್ನು ನೋಡಿ ಅವುಗಳನ್ನು ಕುರಿತು ಕೇಳಿದಳು. ಆಗ ಆತನು ಅವು ನನ್ನ ಹಿಂದಿನ ಜನ್ಮದ ಗುರುತುಗಳೆಂದು, ನನ್ನ ಮರಣವನ್ನು ನನ್ನ ಹಿಂದಿನ ಜನ್ಮ ಪ್ರಾಂತಕ್ಕೆ ಹೋಗಿ ಸತ್ತುಹೋಗುತ್ತೇನೆಂದು, ನಾನು ಎಲ್ಲಿಗೆ ಹೋಗುವುದು ಯಾರಿಗೂ ತಿಳಿಯುವುದಿಲ್ಲವೆಂದು, ಸ್ವಲ್ಪ ಕಾಲವೇ ನಿಮ್ಮ ಹತ್ತಿರ ಇರುತ್ತೇನೆಂದು ಹೇಳಿದ್ದಾನೆ. ಆತನ ಮಾತುಗಳು ಆಗ ಆಕೆಗೆ ಏನೆಂದು ಅರ್ಥವಾಗಿವೆಯೋ, ನಂತರ ಅವುಗಳನ್ನು ಅನೇಕಬಾರಿ ನೋಡಿದರೂ, ಆ ಗುರ್ತುಗಳನ್ನು ಕುರಿತು ಕೇಳಲಿಲ್ಲ. ಕೃಷ್ಣನು ಭಾರತದೇಶದಲ್ಲಿ ಮೊದಲು ಗುಜರಾತ್ ರಾಷ್ಟ್ರದಲ್ಲಿ ಸಮಾಧಿ ಮಾಡಲ್ಪಟ್ಟಿದ್ದಾನೆ. ಆ ಸಮಾಧಿ ಸಮುದ್ರದಲ್ಲಿ ಬೆರೆತುಹೋಗಿದೆ. ನಂತರ ಆತನ

ಜನ್ಮ ವಿದೇಶದಲ್ಲಿ ನಡೆದರೂ, ಆತನು ಪುನಃ ಭಾರತದೇಶಕ್ಕೆ ಬಂದು ಗುಜರಾತ್ ರಾಷ್ಟ್ರದಲ್ಲಿಯೇ ಮರಣಿಸಿದ್ದಾನೆ. ಪುನಃ ಕೃಷ್ಣನು ಮೂರನೆ ಜನ್ಮವನ್ನು ಯಾವಾಗಾದರೂ ತೆಗೆದುಕೊಂಡರೆ, ಕೃಷ್ಣನ ಮೂರನೆಯ ಜನ್ಮದಲ್ಲಿ ಆತನು ಧರಿಸುವ ಶರೀರಕ್ಕೆ ಹಾವು ಕಚ್ಚಿದ ಗುರುತುಗಳು ತಪ್ಪದೆ ಇರುತ್ತವೆಂದು ನಾವು ಅಂದುಕೊಳ್ಳುತ್ತಿದ್ದೇವೆ. ಮೂರನೆ ಜನ್ಮ ಶರೀರಕ್ಕೆ ಹಾವು ಕಚ್ಚಿದ ಗುರುತುಗಳು ಎಲ್ಲಿರುತ್ತವೋ, ನಮ್ಮ ಅಂದಾಜಿಗೆ ಬರುತ್ತಿಲ್ಲ. ಆದ್ದರಿಂದ ಹೇಳಲಾರದೆ ಹೋಗುತ್ತಿದ್ದೇವೆ. ಇಷ್ಟಕ್ಕು **ಕೃಷ್ಣನ ಎರಡನೆ ಜನ್ಮವನ್ನು ಕುರಿತು ಯಾರಾಗಿರುವುದು ಹೇಳಲಿಲ್ಲವೆ ಎಂಬ ಪ್ರಶ್ನೆ ಯಾರಿಗಾದರು ಬಂದರೆ, ಎರಡನೆ ಜನ್ಮವನ್ನು ಕುರಿತು "ಕೃಷ್ಣನು ದೇವರಾ–ಭಗವಂತನಾ," ಎಂಬ ಗ್ರಂಥದಲ್ಲಿ ಕೃಷ್ಣನ ಮರಣ ಲೋಕಕ್ಕೆ ಕಣ್ತೆರೆಸಿದೆ ಎನ್ನುವ ಅಧ್ಯಾಯದಲ್ಲಿ ಸಂಪೂರ್ಣವಾಗಿ ಬರೆದಿದ್ದೇವೆ.** ಎರಡನೆ ಜನ್ಮದಲ್ಲಿಯೂ ಸಹ ತಾತ್ಕಾಲಿಕ ಮರಣವನ್ನು ಹೊಂದಿದ ಕೃಷ್ಣನು, ಪುನಃ ಮೂರು ದಿನಗಳಿಗೆ ತನಗೆ ತಾನಾಗಿ ಎದ್ದು, ಸುಮಾರು 40 ದಿನಗಳು ಆ ಪ್ರದೇಶದಲ್ಲಿ ಇದ್ದು, ಅಲ್ಲಿಂದ ಇಂದೂದೇಶಕ್ಕೆ ಬಂದಿದ್ದಾನೆ. ಇಲ್ಲಿಯೆ ಮರಣಿಸಿದ್ದಾನೆ.

ಭೂಮಿ ಮೇಲೆ ಹುಟ್ಟಿದ ಯಾವ ಮನುಷ್ಯನಾಗಲಿ, ಯಾವ ಜೀವರಾಶಿ ಯಾಗಲಿ ಕಾಲ ಮರಣವನ್ನು ತಪ್ಪದೇ ಹೊಂದಬೇಕು. ಆದರೆ ಅಕಾಲ ಮರಣವನ್ನಾಗಲಿ, ತಾತ್ಕಾಲಿಕ ಮರಣವನ್ನಾಗಲಿ ಹೊಂದಬಹುದು ಅಥವಾ ಹೊಂದದೆ ಹೋಗಬಹುದು. ಈ ಎರಡು ಮರಣಗಳು ಖಚಿತವೆಂಬ ನಿಯಮವಿಲ್ಲ. ಅವು ಆ ಜೀವಿಯ ಕರ್ಮವನ್ನನುಸರಿಸಿ ನಿರ್ಣಯಿಸಲ್ಪಡುವ ಮರಣಗಳೆಂದು ತಿಳಿಯಬೇಕು. ದ್ವಾಪರಯುಗದಲ್ಲಿ ಶ್ರೀಕೃಷ್ಣನು ತನ್ನ ಕರ್ಮದ ಪ್ರಕಾರ ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆ. ಹಾಗೆ ತನ್ನ ಎರಡನೆ ಜನ್ಮದಲ್ಲಿಯೂ ಸಹ ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆ. ಇನ್ನು ಮೂರನೆ ಜನ್ಮದಲ್ಲಿ ಹೇಗಿರುತ್ತದೋ! ಅದು ಆತನ ಕರ್ಮಕ್ಕೆ ಸಂಬಂಧಿಸಿದ ವಿಷಯ, ಆದ್ದರಿಂದ ನಡೆಯುವ ವಿಷಯವನ್ನು ಹೇಳಲಾರೆವು. ನಾವು ಈ ದಿನ

ಮೂರನೆವಿಧ ಮರಣವಾದ ತಾತ್ಕಾಲಿಕ ಮರಣವನ್ನು ಕುರಿತು ಹೇಳಿಕೊಳ್ಳುವುದಕ್ಕೆ ಆಧಾರವಾಗಿ ಕೃಷ್ಣನು ಆ ಮರಣವನ್ನು ಹೊಂದಿ ತೋರಿಸಿದ್ದಾನೆ. ಅಷ್ಟೇ ಅಲ್ಲದೆ ತಾತ್ಕಾಲಿಕ ಮರಣವನ್ನು ಹೊಂದಿದವರು ತಮಗೆ ತಾವಾಗಿಪುನಃ ಏಳಬಹುದೆಂದು ಸಹ ನಿರೂಪಿಸಿ ತೋರಿಸಿದ್ದಾನೆ.



## ತಾತ್ಕಾಲಿಕ ಮರಣವನ್ನು ಹೊಂದಿದವನಿಗೆ ವೈದ್ಯದ ಅವಶ್ಯಕವಾ?

ಹಾವು ಕಚ್ಚಿ ಮರಣಿಸಿದವರಿಗೆ ವೈದ್ಯ ಮಾಡಿ ಬದುಕಿಸಬಹುದೆಂದಿದ್ದೀರ. ಕೃಷ್ಣನು ಹಾವು ಕಚ್ಚಿ ಸತ್ತುಹೋದರೂ ತನಗೆ ತಾನಾಗಿ ಎದ್ದಿದ್ದಾನೆ. ಇಲ್ಲಿ ಎರಡು ಪದ್ಧತಿಗಳು ಕಾಣಿಸುತ್ತವೆ. ಇದರಲ್ಲಿ ಯಾವ ಪದ್ಧತಿ ಸರಿಯಾದುದು? ಹಾವಿನ ವಿಷದಿಂದ ಮರಣಿಸಿದ ಸಾಧಾರಣ ಮನುಷ್ಯನೂ ಸಹ ಚಿಕಿತ್ಸೆ ಇಲ್ಲದಂತೆ ಮೇಲೇಳುತ್ತಾನಾ? ಎಂದು ಕೆಲವರು ಕೇಳಬಹುದು. ಅದಕ್ಕೆ ನನಗೆ ತಿಳಿದ ಸಮಾಧಾನ ಏನೆಂದರೆ! ಮನುಷ್ಯನಿಗೆ ಎಚ್ಚರ, ನಿದ್ರೆ, ಸ್ವಪ್ನ ಎಂದು ಮೂರು ಸ್ಥಿತಿಗಳು ಇವೆ. ಈ ಮೂರು ಸ್ಥಿತಿಗಳು ಎಲ್ಲರಿಗೂ ತಿಳಿದಿರುವವೆ. ಮನುಷ್ಯ ಮಲಗಿರುವಾಗ ನಿದ್ರೆಯೊಳಗೆ ಹೋಗುವುದು, ನಿದ್ರೆಯೊಳಗೆ ಹೋಗಿರುವವನು ಯಾವಾಗಾದರು ಸ್ವಪ್ನದೊಳಗೆ ಹೋಗುವುದು, ನಡೆಯುತ್ತಿರುವುದು ಸಹ ಎಲ್ಲರಿಗೂ ತಿಳಿದ ವಿಷಯವೆ. ಆದರೆ ಮನುಷ್ಯ ಎಚ್ಚರದಿಂದ ನಿದ್ರೆಯೊಳಗೆ ಹೇಗೆ ಹೋಗುತ್ತಿದ್ದಾನೆ? ನಿದ್ರೆಯಿಂದ ಸ್ವಪ್ನದೊಳಗೆ ಹೇಗೆ ಹೋಗುತ್ತಿದ್ದಾನೆ? ಎಂಬ ವಿಷಯ ಬಹಳ ಜನರಿಗೆ ತಿಳಿಯದ ರಹಸ್ಯವೆ. ಮನುಷ್ಯನಿಗೆ ನಿದ್ರೆ ಎಚ್ಚರಿಕೆಗಳು ಎಂತಹವೋ ಅಂತಹವೆ ಮರಣ, ತಾತ್ಕಾಲಿಕ ಮರಣ. ಆದರೆ ತಾತ್ಕಾಲಿಕ ಮರಣವನ್ನು ಹೊಂದಿದವನು ನಂತರ ಮರಣವನ್ನು ಹೊಂದ ಬಹುದು. ಹಾಗೆ ಮರಣವನ್ನು ಹೊಂದಿದವನು ಬೇರೆ ಜನ್ಮಕ್ಕೆ ಹೋಗಿ ಎಚ್ಚರಿಕೆಯನ್ನು ಹೊಂದುತ್ತಿದ್ದಾನೆ. ಇದರಿಂದ ಒಬ್ಬ ಜೀವಿಯೂ ಯಾವಾಗಲೂ ನಿದ್ರೆ, ಎಚ್ಚರ, ಸ್ವಪ್ನಗಳ ಮಧ್ಯ ಜೀವಿಸುತ್ತಿದ್ದಾನೆಂದು ತಿಳಿಯುತ್ತಿದೆ. ಅದೇ

ವಿಧವಾಗಿ ಒಬ್ಬ ಜೀವಿಯ ಜೀವನ, ಮರಣ, ತಾತ್ಕಾಲಿಕ ಮರಣಗಳನ್ನು ಹೊಂದುತ್ತಿದ್ದಾನೆಂದು ತಿಳಿಯುತ್ತಿದೆ. ಮನುಷ್ಯ ಮಲಗಿರುವಾಗ ಬಹಳ ಜನರಿಗೆ ಮೊದಲು ನಿದ್ರೆ ಬರುತ್ತದೆ, ನಂತರ ಸ್ವಪ್ನವೂ ಸಹ ಬರುತ್ತದೆ. ಯಾವಾಗಾದರು ಒಂದುಸಲ ಮೊದಲು ಜೀವಿಯು ಸ್ವಪ್ನದೊಳಗೆ ಹೋಗುತ್ತಿದ್ದಾನೆ. ಹಾಗೆ ಮೊದಲೆ ಸ್ವಪ್ನದೊಳಗೆ ಹೋದವನು ಪುನಃ ಎಚ್ಚರದೊಳಗೆ ಬರುತ್ತಿದ್ದಾನೆ. ಒಂದೊಂದು ಸಲ ಸ್ವಪ್ನದಿಂದ ನೇರವಾಗಿ ನಿದ್ರೆಯೊಳಗೆ ಹೋಗುತ್ತಿದ್ದಾನೆ. ಇದನ್ನನುಸರಿಸಿ ಎಚ್ಚರದಲ್ಲಿರುವವನು ನೇರವಾಗಿ ನಿದ್ರೆಯೊಳಗೆ ಹೋಗುತ್ತಾನೆಂದು ಹೇಳಲಾರೆವು. ಹಾಗೆ ಸ್ವಪ್ನದೊಳಗೆ ಹೋದವನು ನೇರವಾಗಿ ಎಚ್ಚರದೊಳಗೆ ಹೋಗುತ್ತಾನೆಂದು ಹೇಳಲಾರೆವು. ಯಾವ ಸ್ಥಿತಿಯಿಂದ ಯಾವ ಸ್ಥಿತಿಗಾದರು ಹೋಗಬಹುದು. ಹಾಗೆಯೇ ಮನುಷ್ಯ (ಜೀವಿಯು) ಜೀವನದಿಂದ ಮರಣವಶನ್ನು ಹೊಂದುತ್ತಿದ್ದಾನೆ. ಆದರೆ ಯಾವಾಗಾದರು ಒಂದುಸಲ ತಾತ್ಕಾಲಿಕ ಮರಣವನ್ನು ಸಹ ಹೊಂದುತ್ತಿದ್ದಾನೆ. ತಾತ್ಕಾಲಿಕ ಮರಣ ಹೊಂದಿದವನು ಪುನಃ ಜೀವನದೊಳಗೆ ಬರಬಹುದು. ಇಲ್ಲದಿದ್ದರೆ ನೇರವಾಗಿ ಮರಣದೊಳಗಾದರು ಹೋಗಬಹುದು. ಆದ್ದರಿಂದ ಜೀವನ, ಮರಣ, ತಾತ್ಕಾಲಿಕ ಮರಣ ಎನ್ನುವವು ಎಚ್ಚರ, ನಿದ್ರೆ, ಸ್ವಪ್ನಗಳಿಗೆ ಸಮಾನವಾಗಿ ಇವೆಯೆಂದು ಹೇಳಬಹುದು.

ಮನುಷ್ಯ ಎಚ್ಚರದಲ್ಲಿರುವಾಗ ಶರೀರದಲ್ಲಿ ಐದು ಜ್ಞಾನೇಂದ್ರಿಯಗಳು ಕೆಲಸ ಮಾಡುತ್ತವೆ. ಕಣ್ಣು ತೋರಿಸುತ್ತಿದೆ, ಕಿವಿ ಕೇಳಿಸುತ್ತಿದೆ. ಆದ್ದರಿಂದ ಒಳಗಿರುವ ಜೀವಿಗೆ ಹೊರಗಿನ ಸಮಾಚಾರ ತಿಳಿಯುತ್ತಿದೆ. ಯಾರಾದರು ತನ್ನ ಹೆಸರಿಡಿದು ಕರೆದರೆ ತಕ್ಷಣ ಅವರ ಕಡೆ ನೋಡಿ ಅವರರೊಂದಿಗೆ ಮಾತನಾಡುವುದು ನಡೆಯುತ್ತದೆ. ಕರೆದ ತಕ್ಷಣ ಆ ಕರೆದ ವಿಷಯ ಎಚ್ಚರದಲ್ಲಿದ್ದಾನಾದ್ದರಿಂದ ಜೀವಿಗೆ ತಿಳಿದಿದೆ. ಎಚ್ಚರಿಕೆಯಲ್ಲಿ ಕಿವಿಯಿಂದ ಶಬ್ದ ತಿಳಿದಿದೆ. ಅದೇ ನಿದ್ರೆಯಲ್ಲಿ ಆದರೆ ಮನುಷ್ಯನಿಗೆ ಐದು ಇಂದ್ರಿಯಗಳಿಂದ ಸಮಾಚಾರ ಸ್ವಲ್ಪವೂ ಸಹ ತಿಳಿಯುವುದಿಲ್ಲ ಕಾರಣ ಏನೆಂದರೆ? ಇಂದ್ರಿಯಗಳಿಂದ

ಸಮಾಚಾರವನ್ನು ಜೀವಿಗೆ ಸೇರಿಸುವ ಮನಸ್ಸು ಶರೀರದಲ್ಲಿ ಇಲ್ಲ. ಆದ್ದರಿಂದ ಕಿವಿಯಿಂದ ಯಾವ ಸಮಾಚಾರವು ನಿದ್ರೆಯಲ್ಲಿರುವ ಜೀವಿಗೆ ಸೇರುವುದಿಲ್ಲ. ಆದರೆ ಯಾರಾದರು ನಿದ್ರಿಸುವಾಗ ಆತನನ್ನು ಕರೆದರು ಆತನು ನಿದ್ರೆಯಿಂದ ಎದ್ದೇಳುತ್ತಿದ್ದಾನೆ. ಆದರೆ ನಿದ್ರೆಹೋಗುವವನನ್ನು ಕರೆದಾಗ ಆ ಕೂಗು ನಿದ್ರೆಯಲ್ಲಿರುವವನಿಗೆ ಹೇಗೆ ಕೇಳಿಸಿದೆ? ನನ್ನನ್ನೇ ಕರೆಯುತ್ತಿದ್ದಾರೆಂದು ಅವನಿಗೆ ಹೇಗೆ ತಿಳಿದಿದೆ? ಅವನು ಹೇಗೆ ಎದ್ದಿದ್ದಾನೆ? ಎನ್ನುವ ಪ್ರಶ್ನೆಗಳಿಗೆ ಉತ್ತರವನ್ನು ತಿಳಿದುಕೊಂಡರೆ ಮನುಷ್ಯನಿಗಿರುವ ನಿದ್ರೆ, ಜಾಗ್ರತ, ಸ್ವಪ್ನದ ರಹಸ್ಯಗಳು ತಿಳಿಯುತ್ತದೆ. ನಿದ್ರೆ, ಎಚ್ಚರ, ಸ್ವಪ್ನದ ವಿವರವನ್ನು ಪೂರ್ತಿಯಾಗಿ ತಿಳಿದರೆ ನಂತರ ಜೀವನ, ಮರಣ, ತಾತ್ಕಾಲಿಕ ಮರಣಗಳನ್ನು ಕುರಿತು ಸುಲಭವಾಗಿ ತಿಳಿಯಬಹುದು. ಆದ್ದರಿಂದ ಮೊದಲು ನಿದ್ರೆ, ಎಚ್ಚರ, ಸ್ವಪ್ನಗಳನ್ನು ಕುರಿತು ತಿಳಿದುಕೊಳ್ಳೋಣ. ಎಚ್ಚರ ಜೀವನವಂತದ್ದು, ನಿದ್ರೆ ಮರಣವಂತದ್ದು, ತಾತ್ಕಾಲಿಕ ಮರಣವು ಸ್ವಪ್ನವಂತದ್ದು. ಮನುಷ್ಯ ಹೊರಗೆ ಎಷ್ಟೋ ದೊಡ್ಡ ಹುದ್ದೆಯಲ್ಲಿದ್ದರೂ ಶರೀರದಲ್ಲಿ ತನ್ನ ಸ್ಥಿತಿ ಏನೊ? ತಾನು ಯಾರೋ? ತನಗೆ ತಿಳಿಯದ ಪರಿಸ್ಥಿತಿ ಯಲ್ಲಿ ಇದ್ದಾನೆ. ಎಚ್ಚರವಿರುವ ಜೀವನದಲ್ಲಿರುವ ಮನುಷ್ಯ ಶರೀರದಲ್ಲಿ ಜೀವಿಯನ್ನು ಸೇರಿಸಿ 25 ಭಾಗಗಳು ಇವೆ. ಆ 25 ಭಾಗಗಳನ್ನು ಆತ್ಮ ಶಕ್ತಿಯನ್ನು ಕೊಟ್ಟು ನಡೆಸುತ್ತದೆ. ಆದ್ದರಿಂದ **ಎಲ್ಲಾ ನಾನೇ ಎಂದುಕೊಂಡು ದೊಡ್ಡದಾಗಿ ಕುಣಿದಾಡುವ ಜೀವಾತ್ಮ ಶರೀರದಲ್ಲಿ ಒಬ್ಬ ಲುಚ್ಚನು ಮಾತ್ರವೆ!** ತಾನು ಉಚ್ಚಾನಾಗಿ ಇದ್ದಾನೆಂದುಕೊಳ್ಳುವ ಜೀವಿಯೂ, ಎಲ್ಲಾ ಶರೀರಭಾಗ ಗಳಿಗಿಂತ ಲುಚ್ಚನಂತೆ (ನೀಚವಾಗಿ) ಇದ್ದಾನೆಂದು ತಿಳಿಯದೆ ತನಗೆ ತಾನು ದೊಡ್ಡದಾಗಿ ಭ್ರಮಿಸುತ್ತಿದ್ದಾನೆ. ಶರೀರದಲ್ಲಿ ಜೀವಿಯು ಕೇವಲ ಸುಖದುಃಖಗಳನ್ನು ಅನುಭವಿಸುವ ಕೆಲಸ ಮಾತ್ರವೆ ಮಾಡುತ್ತಿದ್ದಾನೆ. ಅದೇ ಶರೀರದಲ್ಲಿನ ಮನಸ್ಸು, ಜೀವಾತ್ಮಗಿಂತ ದೊಡ್ಡದಾಗಿ ಎರಡು ವಿಧಗಳ ಕೆಲಸಗಳನ್ನು ಮಾಡುತ್ತಿದೆ. ಹಾಗೆ ಬುದ್ಧಿ ಎರಡು ವಿಧಗಳಾಗಿ ಕೆಲಸ ಮಾಡುತ್ತಿದೆ. ಎರಡೆರಡು ಕೆಲಸಗಳನ್ನು ಮಾಡುವ ಮನಸ್ಸು, ಬುದ್ಧಿಗಿಂತ ಒಂದು ಕೆಲಸವನ್ನು ಮಾತ್ರವೆ ಮಾಡುವ ಜೀವಿಯು ಕಡಿಮೆಯವನೆಂದೇ ಹೇಳಬಹುದು.

ನಿದ್ರೆಯಲ್ಲಿ ಶರೀರದಲ್ಲಿನ ಜೀವಿಗೆ ಹೊರಗಿನ ವಿಷಯಗಳು ಏನೂ ಸಹ ತಿಳಿಯುವುದಿಲ್ಲ. ಆದ್ದರಿಂದ ಆ ಸಮಯದಲ್ಲಿ ಜೀವಿಯು ಎಲ್ಲಾ ವಿಧವಾಗಿ ಅಂಧನೆಂದೇ ಹೇಳಬಹುದು. ಎಚ್ಚರದಲ್ಲಿ ಶರೀರವೆಲ್ಲವೂ ವ್ಯಾಪಿಸಿರುವ ಮನಸ್ಸು, ನಿದ್ರೆಯಲ್ಲಿ ಶರೀರವೆಲ್ಲವನ್ನು ಬಿಟ್ಟು ತಲೆಯಲ್ಲಿನ ಬ್ರಹ್ಮನಾಡಿಯಲ್ಲಿ ಮಾತ್ರವೆ ಇದ್ದುಹೋಗುತ್ತಿದೆ. ಹೊರಗಿನ ವಿಷಯಗಳನ್ನು ತಿಳಿಸುವ ಮನಸ್ಸು ಶರೀರವೆಲ್ಲವೂ ಇಲ್ಲದಿರುವುದರಿಂದ, ಶರೀರದ ಹೊರಗಿರುವ ಜ್ಞಾನೇಂದ್ರಿಯಗಳ ವಿಷಯಗಳು ಜೀವಿಗೆ ತಿಳಿಯದಂತೆ ಹೋಗುತ್ತಿವೆ. ಆದ್ದರಿಂದ ನಿದ್ರೆಯಲ್ಲಿರುವವನನ್ನು ಕರೆದರೂ ಆ ಮಾತು ಒಳಗಿನ ಜೀವಿಯವರೆಗೂ ತಿಳಿಯುವುದಿಲ್ಲ. ತನ್ನನ್ನು ಕರೆದಂತೆ ಜೀವಿಗೆ ತಿಳಿದಿಲ್ಲ. ಆದರೂ ಹೊರಗಿನ ವ್ಯಕ್ತಿ ಕರೆದಾಗ ನಿದ್ರೆಯಲ್ಲಿರುವವನು ಯಾರೊ ತನ್ನನ್ನು ಕರೆಯುತ್ತಿದ್ದಾರೆಂದು ತಿಳಿದು ಎಚ್ಚರಗೊಳ್ಳುತ್ತಾನೆ. ಜೀವಿಗೆ ಹೊರಗಿನ ಜ್ಞಾನೇಂದ್ರಿಯಗಳ ಸಮಾಚಾರವನ್ನು ಸೇರಿಸುವ ಮಧ್ಯವರ್ತಿಯಂತಹ ಮನಸ್ಸು ಇಲ್ಲದಿರುವಾಗ, ಹೊರಗೆ ಕರೆಯುವುದು ಒಳಗಿರುವ ಜೀವಿಗೆ ಹೇಗೆ ತಿಳಿದಿದೆ? ಎಂಬ ಪ್ರಶ್ನೆಗೆ ಉತ್ತರವಾಗಿ ಹೊರಗೆ ಕರೆದಿರುವುದು ಮನಸ್ಸಿನ ಮೂಲಕ ಜೀವಿಯನ್ನು ಸೇರಲಿಲ್ಲವೆಂದು ಹೇಳಬಹುದು. ಆದರೆ ಆ ಸಮಯದಲ್ಲಿ ಶರೀರವೆಲ್ಲವೂ ವ್ಯಾಪಿಸಿರುವ ಆತ್ಮ ಸ್ವತಃವಾಗಿ ಹೊರಗೆ ಯಾರೋ ಕರೆದಂತೆ ಒಳಗಿನ ಮನಸ್ಸಿಗೆ ತಿಳಿಯುವಂತೆ ಮಾಡುತ್ತದೆ. ಆತ್ಮವೆ ಬ್ರಹ್ಮನಾಡಿಯಲ್ಲಿ ಅಡಗಿರುವ ಮನಸ್ಸಿಗೆ ತಿಳಿಸುವುದರಿಂದ ಮನಸ್ಸು ಮೌನವನ್ನು ಬಿಟ್ಟು ಎಚ್ಚರಗೊಂಡು ಶರೀರವೆಲ್ಲಾ ಕ್ಷಣಗಳಲ್ಲಿ ವ್ಯಾಪಿಸುತ್ತದೆ. ಹಾಗೆ ಮನಸ್ಸು ಶರೀರ ಎಲ್ಲವನ್ನು ವ್ಯಾಪಿಸುವುದರಿಂದ ಹೊರಗಿನ ಇಂದ್ರಿಯಗಳ ವಿಷಯಗಳೆಲ್ಲವೂ ಆ ಕ್ಷಣದಿಂದ ಜೀವಿಗೆ ತಿಳಿಯುತ್ತವೆ. ಮೊದಲು ನಿದ್ರೆಯಲ್ಲಿರುವ ಜೀವಿಗೆ ಜ್ಞಾಪಕ ತರಲು ಆತ್ಮವೆ ಕಾರಣವಾಗಿದೆಯೆಂದು, ಆತ್ಮವೇ ಮನಸ್ಸನ್ನು ಜಾಗೃತಪಡಿಸಿದೆ ಎಂದು, ಆದ್ದರಿಂದ ನಿದ್ರೆಯಿಂದ ಮನುಷ್ಯ ಏಳುತ್ತಿದ್ದಾನೆಂದು ತಿಳಿಯುತ್ತದೆ. ಮನುಷ್ಯ ನಿದ್ರೆಯೊಳಗೆ ಹೋಗುವುದು, ಆ ನಿದ್ರೆ ಸಮಯದಲ್ಲಿ ಮನುಷ್ಯನಿಗೆ ಹೊರಗಿನ ವಿಷಯಗಳು ಏನು ತಿಳಿಯದಂತೆ ಹೋಗುವುದು ಎಲ್ಲರಿಗೂ ತಿಳಿದ ವಿಷಯವೇ. ನಿದ್ರೆಯಲ್ಲಿ ಹೊರಗಿನ ಸಮಾಚಾರ ತಿಳಿಯದ

ಮನುಷ್ಯನಿಗೆ ತನ್ನನ್ನು ಕರೆದಾಗಲೇ ತನ್ನನ್ನು ಕರೆದಂತೆ ಹೇಗೆ ತಿಳಿದಿದೆ? ಎಂಬ ಪ್ರಶ್ನೆಗೆ **ಕೆಲವು ಪ್ರತ್ಯೇಕ ವಿಷಯಗಳನ್ನು ಆತ್ಮವೇ ಒಳಗಿನ ಮನಸ್ಸಿಗೆ ತಿಳಿಸಿ ಎಬ್ಬಿಸುತ್ತದೆಂದು ಅರ್ಥವಾಗುತ್ತದೆ.**

ನಿದ್ರೆಯನ್ನು ಮರಣಕ್ಕೆ ಸಮಾನವಾಗಿ ಹೇಳಿದ್ದೇವೆ. ತಾತ್ಕಾಲಿಕ ಮರಣವನ್ನು ಸ್ವಪ್ನಕ್ಕೆ ಸಮಾನವಾಗಿ ಹೋಲಿಸಿ ಹೇಳಿದ್ದೇವೆ. ನಿದ್ರೆಯಲ್ಲಾಗಲಿ, ಸ್ವಪ್ನದಲ್ಲಾಗಲಿ ಮನುಷ್ಯ ಹೊರಗಿನ ಸಂಬಂಧ ಇಲ್ಲದಂತಿದ್ದಾನೆ. ಆದ್ದರಿಂದ ಸ್ವಪ್ನದಲ್ಲಿರುವ ಅವನನ್ನು ಸಹ ಹೊರಗೆ ನಿದ್ರೆಯಲ್ಲಿರುವಂತೆ ನಾವು ಲೆಕ್ಕಿಸುತ್ತಿದ್ದೇವೆ. ಶರೀರದೊಳಗೆ ಜೀವಿಯು ಸ್ವಪ್ನದಲ್ಲಿ ಇದ್ದರೂ, ಅದು ಸ್ವಪ್ನಾವಸ್ಥೆ ಎಂದು ಯಾರಿಗೂ ತಿಳಿದಿಲ್ಲ. ಅದನ್ನು ನಿದ್ರೆಯೆಂದೇ ಎಲ್ಲರೂ ಅಂದುಕೊಳ್ಳುತ್ತಾರೆ. ಹಾಗೆಯೆ ಮರಣಿಸಿದವನನ್ನಾಗಲಿ, ತಾತ್ಕಾಲಿಕ ಮರಣವನ್ನು ಹೊಂದಿದವನನ್ನಾಗಲಿ, ಮರಣಿಸಿದವನ ಕೆಳಗೆ ಜಮಮಾಡಲಾಗುತ್ತದೆ ನೋಡುತ್ತೇವೆ. ಸ್ವಪ್ನದಲ್ಲಿರುವವನು ಸಹ ಹೊರಗೆ ನಿದ್ರೆ ಮಾಡಿದಂತೆ ಕಾಣಿಸುತ್ತಿರುವಂತೆ, ತಾತ್ಕಾಲಿಕ ಮರಣವನ್ನು ಹೊಂದಿದವನು ಸಹ ಹೊರಗೆ ಮರಣಿಸಿದಂತೆ ಕಾಣಿಸುತ್ತಿದ್ದಾನೆ. ನಿದ್ರೆ, ಸ್ವಪ್ನ ಎರಡೂ ಹೊರಗೆ ಒಂದೇ ವಿಧವಾಗಿ ಕಾಣಿಸಿದರೂ ಕೆಲವರು ಅನುಭವಜ್ಞರು ನಿದ್ರೆಯನ್ನು, ಸ್ವಪ್ನವನ್ನು ಬೇರೆ ಬೇರೆಯಾಗಿ ಗುರ್ತಿಸುತ್ತಾರೆ. ನಿದ್ರೆ, ಸ್ವಪ್ನವೂ ಒಂದೇ ವಿಧವಾಗಿ ಇದ್ದರೂ ಸ್ವಲ್ಪ ವ್ಯತ್ಯಾಸದಿಂದ ಇವೆಯೆಂದು, ಗಾಢನಿದ್ರೆಯಲ್ಲಿ ಮನುಷ್ಯನಿಗೆ ಶ್ವಾಸ ಹೆಚ್ಚಾಗಿ ಶಬ್ದವು ಮಾಡುತ್ತಾ ಆಡುತ್ತಿರುತ್ತದೆಂದು, ಅದೇ ಸ್ವಪ್ನದಲ್ಲಿ ಆದರೆ ಶ್ವಾಸ ಶಬ್ದ ಇಲ್ಲದಂತೆ ಇರುತ್ತದೆಂದು ಹೇಳುತ್ತಿದ್ದಾರೆ. ಅದೇ ವಿಧವಾಗಿ ಕೆಲವರು ಆತ್ಮವನ್ನು ಅಧ್ಯಯನ ಮಾಡಿದವರು ಮರಣವನ್ನು, ತಾತ್ಕಾಲಿಕ ಮರಣವನ್ನು ಸ್ವಲ್ಪ ವ್ಯತ್ಯಾಸದಿಂದ ಗುರುತಿಸುತ್ತಿದ್ದಾರೆ. ಹಾಗೆ ಶ್ರೀಕೃಷ್ಣನು, ಯೇಸು ಮೊದಲಾದವರು ಮಾತ್ರವೇ ತಾತ್ಕಾಲಿಕ ಮರಣವನ್ನು ಗುರುತಿಸಿದ್ದಾರೆ. ಆ ಮರಣವನ್ನು ಹೊಂದಿದವರನ್ನು ಎಬ್ಬಿಸಿದ್ದಾರೆ. ತಾತ್ಕಾಲಿಕ ಮರಣವನ್ನು ಹೊಂದಿದವನನ್ನು ಎಲ್ಲರೂ ಸತ್ತುಹೋಗಿದ್ದಾನೆಂದು ಭಾವಿಸಿದರೂ, ಅದರ ವಿವರ ತಿಳಿದವರು ಸತ್ತುಹೋಗಲಿಲ್ಲವೆಂದು, ನಿದ್ರೆಮಾಡುತ್ತಿದ್ದಾನೆಂದು

ತಿಳಿಸಿದ್ದಾರೆ. ತಾತ್ಕಾಲಿಕ ಮರಣವನ್ನು ನೀವು ಗುರುತಿಸುತ್ತೀರಾ? ಎಂದು ಯಾರಾದರು ನನ್ನನ್ನು ಕೇಳಿದರೆ, ಸ್ವಪ್ನದಲ್ಲಿರುವವನನ್ನು ಗುರುತಿಸಬಹುದೇನೋ, ಆದರೆ ತಾತ್ಕಾಲಿಕ ಮರಣವನ್ನು ಹೊಂದಿದವನನ್ನು ಗುರುತಿಸಲಾರೆನೆಂದು ಹೇಳುತ್ತಿದ್ದೇನೆ.

ಪೂರ್ವಕಾಲದಲ್ಲಿ ಕೃಷ್ಣನು, ಏಸು ಹೇಗೆ ಗುರುತಿಸಿದ್ದಾರೆ? ಹೇಗೆ ಎಬ್ಬಿಸಿದ್ದಾರೆ? ಎನ್ನುವ ಪ್ರಶ್ನೆಗಳಿಗೆ ನನ್ನ ಹತ್ತಿರ ಉತ್ತರ ಇಲ್ಲವೆಂದೇ ಹೇಳುತ್ತಿದ್ದೇನೆ. ಏಕೆಂದರೆ! ಕೃಷ್ಣ, ಏಸು ಅಂತಹವನು ನಾನಲ್ಲ ಅಲ್ಲವೆ! ಇನ್ನು ಮೂರನೆ ವಿಧ ಮರಣದಿಂದ ಬದುಕಿದವನ ಶರೀರದಲ್ಲಿ ಏನು ನಡೆದಿದೆಯೋ ಹೇಳುತ್ತೇನೆ. ಮೂರನೆ ವಿಧ ಮರಣವಾದ ತಾತ್ಕಾಲಿಕ ಮರಣವನ್ನು ಹೊಂದಿದ ಕೆಲವರಿಗೆ ಮಾತ್ರವೆ ವೈದ್ಯದ ಅಗತ್ಯ. ಉದಾಹರಣೆಗೆ ನಾಗರಹಾವು ಕಚ್ಚಿದಾಗ ಶರೀರದೊಳಗೆ ಏರಿದ ವಿಷದಲ್ಲಿಯೂ, ಕಚ್ಚಿದ ಹಾವಿನ ಉದ್ದೇಶದಲ್ಲಿಯೂ ಕೆಲವು ವ್ಯತ್ಯಾಸಗಳಿರುತ್ತವೆ. ನಾಗರಹಾವಿನ ವಿಷವು ಮತ್ತಿನ ಔಷಧಿಯಂತಹದ್ದು. ಹೆಚ್ಚಾಗಿ ಮತ್ತಿನ ಔಷಧಿಯನ್ನು ತಿಂದವನು ಸತ್ತುಹೋದಂತೆ ಮನುಷ್ಯ ಸತ್ತುಹೋಗುತ್ತಾನೆ. ಮನುಷ್ಯರಲ್ಲಿ ಪೂರ್ತಿ ಜ್ಞಾಪಕ ಇರುವವರು, ಕಡಿಮೆ ಜ್ಞಾಪಕ ಇರುವವರು ಇದ್ದಾರೆ. ಕಡಿಮೆ ಜ್ಞಾಪಕ ಇರುವವರು ಬೇಗನೆ ನಿದ್ರೆಯೊಳಗೆ ಹೋಗುತ್ತಾರೆ. ಹೆಚ್ಚಾಗಿ ಜ್ಞಾಪಕ ಇರುವವರು ನಿದ್ರೆಯೊಳಗೆ ಬೇಗನೆ ಹೋಗುವುದಿಲ್ಲ. ಅಂತಹವರು ಸ್ವಲ್ಪಮಟ್ಟಿಗೆ ನಿದ್ರೆಯನ್ನು ಜಯಿಸಿರುತ್ತಾರೆಂದು ಹೇಳಬಹುದು. ಯೋಗಿಗಳಿಗಾದರೆ ಮನುಸ್ಸನ್ನು ಜಯಿಸುವ ಶಕ್ತಿ ಇರುತ್ತದೆ. ಆದ್ದರಿಂದ ಅಂತಹವರು ಎಲ್ಲರಿಗಿಂತ ಹೆಚ್ಚಾಗಿ ಜ್ಞಾಪಕ ಇರುವವರಾಗಿ ಇರುತ್ತಾರೆ. ಈ ವಿಧವಾಗಿ ಮೂರು ವಿಧಗಳ ಜ್ಞಾಪಕಗಳಿರುವವರಾಗಿ ಮನುಷ್ಯರನ್ನು ವಿಭಜಿಸಬಹುದು. ಕಡಿಮೆ ಜ್ಞಾಪಕ ಇರುವವರನ್ನು ವೈದ್ಯವನ್ನು ಉಪಯೋಗಿಸಿ ಬದುಕಿಸಬಹುದು. ಹೆಚ್ಚಿನ ಜ್ಞಾಪಕ ಹೊಂದಿದ ಎರಡನೆ ವಿಧದವರನ್ನು ವೈದ್ಯ ಇಲ್ಲದಂತೆ ಬದುಕಿಸಬಹುದು. ಮೂರನೆ ವಿಧದವರನ್ನು ಎಲ್ಲರಿಗಿಂತ ಹೆಚ್ಚಾಗಿ ಜ್ಞಾಪಕ ಇರುವವರು, ಇತರರ ಸಹಾಯ ಇಲ್ಲದಂತೆಯೆ ಬದುಕುತ್ತಾರೆ. ಇದರಿಂದ

ತಾತ್ಕಾಲಿಕ ಮರಣವನ್ನು ಹೊಂದಿದ ಎಲ್ಲರಿಗೂ ವೈದ್ಯ ಅವಶ್ಯಕತೆ ಇಲ್ಲವೆಂದು, ಕೆಲವರಿಗೆ ಮಾತ್ರವೆ ವೈದ್ಯದ ಅಗತ್ಯವೆಂದು ತಿಳಿಸುತ್ತಿದ್ದೇವೆ. ವೈದ್ಯದ ಅಗತ್ಯವಾದವರನ್ನು ಗುರುತಿಸಲಾರದೆಹೋದರು, ಅವರಿಗೆ ವೈದ್ಯವು ಮಾಡದಿದ್ದರು, ಅಂತಹವರು ಸ್ವಪ್ನದಿಂದ ನಿದ್ರೆಯೊಳಗೆ ಹೋದಂತೆ, ಕೆಲವು ಗಂಟೆಗಳ ನಂತರವಾಗಲೀ, ಕೆಲವು ದಿನಗಳ ನಂತರವಾಗಲೀ ತಾತ್ಕಾಲಿಕ ಮರಣದಿಂದ ಮರಣದೊಳಗೆ ಹೋಗುತ್ತಾರೆ. ಮಧ್ಯರೀತಿಯ ಜ್ಞಾಪಕ ಹೊಂದಿದವರನ್ನು ವೈದ್ಯದ ಅಗತ್ಯವಿಲ್ಲದಂತೆ ಬದುಕಿಸಬಹುದು. ಅಂತಹವರು ಸಹ ಒಂದೊಂದುಬಾರಿ ತಮಗೆತಾವಾಗಿಯೇ ಎಚ್ಚರದೊಳಗೆ ಬರುತ್ತಾರೆ. ಆದರೆ ಹೊರಗಿನ ಪ್ರಜೆಗಳು ತಾತ್ಕಾಲಿಕ ಮರಣವನ್ನು ಹೊಂದಿದವನನ್ನು ಗುರುತಿಸಲಾರದೆ ಪೂರ್ತಿ ಮರಣಿಸಿದ್ದಾನೆಂದು ತಿಳಿದು, ಊತಾಕಿದರೆ ಕೊನೆಗೆ ಅವರು ಪೂರ್ತಿಯಾಗಿ ಮರಣಿಸಬೇಕಾಗಿ ಬರುತ್ತದೆ. ಹಾಗೆ ತಪ್ಪಾಗಿ ತಿಳಿಯುವುದರಿಂದ ಬಹಳ ಜನರನ್ನು ಊತಿಡುವುದು ನಡೆಯುತ್ತದೆ. ಊತಿಟ್ಟ ನಂತರ ಜ್ಞಾಪಕ ಬಂದರೂ ಉಸಿರಾಡದೆ ಪೂರ್ತಿ ಮರಣವನ್ನು ಹೊಂದಬೇಕಾಗಿ ಬರುತ್ತದೆ.

ಮಧ್ಯರೀತಿಯ ಜ್ಞಾಪಕ ಇರುವವರನ್ನು ಗುರುತಿಸಿ ಇವರು ಸತ್ತುಹೋಗಿಲ್ಲ ನಿದ್ರಾವಸ್ಥೆಯಲ್ಲಿ ಇದ್ದಾರೆಂದು ಗ್ರಹಿಸಿದ ಕೃಷ್ಣನಂತಹ ಆಧ್ಯಾತ್ಮಿಕತಜ್ಞರು, ಸತ್ತುಹೋದವರ ಹತ್ತಿರಕ್ಕೆ ಹೋಗಿ, ಅವನನ್ನು ಹೆಸರಿನಿಂದ ಕರೆದರೂ, ಇಲ್ಲವೆ ಕೈಯಿಂದ ತಟ್ಟಿ ಎಬ್ಬಿಸಿದರೂ, ಮರಣಿಸಿದ್ದಾನೆಂದುಕೊಂಡವನು ಏಳುತ್ತಿದ್ದಾನೆ. ಅಲ್ಲಿಯವರೆಗೂ ಮರಣಿಸಿದಂತೆ ಬಿದ್ದಿರುವ ವ್ಯಕ್ತಿ ಮೇಲೇಳುವುದರಿಂದ ಪಕ್ಕದಲ್ಲಿ ನೋಡುವವರೆಲ್ಲರೂ ಅದು ದೊಡ್ಡ ಮಹತ್ಯವೆಂದು, ಸತ್ತುಹೋದವನನ್ನು ಬದುಕಿಸಿದ ವ್ಯಕ್ತಿಯನ್ನು ಹೊಗಳುವುದು ನಡೆಯುತ್ತದೆ. ಆಗಲೂ ಸಹ ಅವನು ಸತ್ತುಹೋಗಲಿಲ್ಲವೆಂದು ಬದುಕಿದವರು ಹೇಳಿದರೂ, ಇಂತಹ ಮರಣ ಒಂದಿದೆಯೆಂದು ಮನುಷ್ಯರು ಗ್ರಹಿಸಲಾರದೆ ಹೋಗಿದ್ದಾರೆ. ಹಾಗೆ ಬದುಕಿಸಿದ ಆಧ್ಯಾತ್ಮಿಕತಜ್ಞರು ಕೆಲವರಿದ್ದಾರೆ. ಆಧ್ಯಾತ್ಮಿಕಕ್ಕೆ ಧರ್ಮಗಳು

ತಿಳಿಸಿದ ಭಗವಂತನು ಇದ್ದಾನೆ. ಒಟ್ಟಾರೆ ತಾತ್ಕಾಲಿಕ ಮರಣದಿಂದ ಬದುಕಿಸಿದ ಅವರು ದೊಡ್ಡವರೆಂದೇ ಹೇಳಬಹುದು. ಆತ್ಮವನ್ನು ಅಧ್ಯಯನ ಮಾಡಿದ ಆಧ್ಯಾತ್ಮಿಕರಿಗೆ ಆತ್ಮ ವಿಷಯವೆಲ್ಲವೂ ವಿವರವಾಗಿ ತಿಳಿಯುತ್ತದೆ. ಆದ್ದರಿಂದ ಅವರಿಗೆ ತಾತ್ಕಾಲಿಕ ಮರಣವನ್ನು ಹೊಂದಿದವರ ಶರೀರದಲ್ಲಿ ಆತ್ಮ ಎಲ್ಲವನ್ನೂ ಸ್ಥಂಭಿಸುವಂತೆ ಮಾಡಿದೆ ಎಂದು, ಒಳಗೆ ಹೋದ ಶ್ವಾಸ ಒಳಗೇ ಉಳಿದುಹೋಗಿದೆ ಎಂದು ತಿಳಿದು ಅಂತಹವರನ್ನು ಬದುಕಿಸಬೇಕೆಂದು ಕೊಳ್ಳುತ್ತಾರೆ. ಕೃಷ್ಣನು ಸಾಂದೀಪನ ಕುಮಾರನು ಸತ್ತುಹೋಗಿದ್ದಾನೆಂದು ಅಲ್ಲಿಗೆ ಹೋಗಿದ್ದಾನೆ. ಅಲ್ಲಿಗೆ ಹೋದ ನಂತರ ತನ್ನ ಗುರುವು ಸಾಂದೀಪನ ಕುಮಾರನು ಪೂರ್ತಿ ಮರಣಿಸಿಲ್ಲವೆಂದು, ತಾತ್ಕಾಲಿಕ ಮರಣವನ್ನು ಮಾತ್ರವೆ ಹೊಂದಿ ನಿದ್ರೆಹೋಗುತ್ತಿದ್ದಾನೆಂದು ತಿಳಿದುಕೊಂಡಿದ್ದಾನೆ. ಆಗ ಆ ಬಾಲಕನನ್ನು ಪುನಃ ನಿದ್ರೆಯಿಂದ ಎಬ್ಬಿಸಬೇಕೆಂದು ಕೊಂಡನು. ಅಲ್ಲಿನವರು ನೋಡುವುದಕ್ಕೆ ಏನೋ ಒಂದು ತತಂಗವನ್ನು ಮಾಡಿ ಸತ್ತುಹೋದ ಬಾಲಕನನ್ನು ಕೈಹಿಡಿದು ತಟ್ಟಿ ಕರೆಯುವಾಗ ಆ ಬಾಲಕನು ಉಸಿರು ತೆಗೆದುಕೊಂಡು ಎದ್ದು ಕುಳಿತುಕೊಂಡನು.



## ತಾತ್ಕಾಲಿಕ ಮರಣವನ್ನು ಹೊಂದಿದ ಶರೀರವು ಕೆಡುವುದಿಲ್ಲವಾ?

ಪೂರ್ತಿ ಮರಣಿಸಿದ ಶರೀರದಲ್ಲಿ ಆತ್ಮ ಇರುವುದಿಲ್ಲ. ಶರೀರದಲ್ಲಿ ಅಣುವಣುವಿನಲ್ಲಿ ವ್ಯಾಪಿಸಿ ಪ್ರತಿ ಧಾತುಕಣವನ್ನೂ ಕೆಲಸ ಮಾಡಿಸುವ ಆತ್ಮ ತಾತ್ಕಾಲಿಕ ಮರಣವನ್ನು ಹೊಂದಿದ ಶರೀರದಲ್ಲಿ ಇದೆ. ಆತ್ಮವಿಲ್ಲದ ಶರೀರದಲ್ಲಿ ಧಾತುಕಣಗಳಲ್ಲಿ ಬದಲಾವಣೆ ಏರ್ಪಟ್ಟು ಧನುಂಜಯ ಎನ್ನುವ ವಾಯು ತಯಾರಾಗಿ ಕಣಗಳು ಕೆಟ್ಟು ಹೋಗುತ್ತವೆ. ಶರೀರವೆಲ್ಲವೂ ವಾಯು ಏರ್ಪಟ್ಟು ಶರೀರವು ಉಬ್ಬಿ ಕೊನೆಗೆ ಹೊಡೆದು ಹೋಗುತ್ತದೆ. ಆತ್ಮ ಇರುವ ತಾತ್ಕಾಲಿಕ ಮರಣದಲ್ಲಿ ಆತ್ಮದ ಚೈತನ್ಯಶಕ್ತಿ ಮಾತ್ರ ಶರೀರವೆಲ್ಲವೂ ಇಲ್ಲದಂತೆಹೋಗಿ ತಲೆ ಮಧ್ಯಭಾಗದಲ್ಲಿರುವ ಬ್ರಹ್ಮನಾಡಿಯಲ್ಲಿ ಅಡಕವಾಗಿಹೋಗುತ್ತಿದೆ. ಆತ್ಮ

ತನ್ನ ಶಕ್ತಿಯನ್ನು ಶರೀರ ಭಾಗಗಳಿಂದ ಕಳುಹಿಸಿ ಬ್ರಹ್ಮನಾಡಿಯ ಮೇಲ್ಭಾಗದಲ್ಲಿ ಅಡಕವಾಗುವಂತೆ ಮಾಡುತ್ತಿದೆ. ಆತ್ಮ ತನ್ನ ಶಕ್ತಿಯನ್ನು ಶರೀರದಿಂದ ಬ್ರಹ್ಮನಾಡಿಯೊಳಗೆ ಕಳುಹಿಸಿ ತಾನು ಮಾತ್ರ ಶರೀರವೆಲ್ಲ ಇರುವುದರಿಂದ ಶರೀರದಲ್ಲಿ ಯಾವ ಭಾಗದಲ್ಲಿನ ಧಾತುಕಣವೂ ಸಹ ಕೆಟ್ಟುಹೋಗುವುದಿಲ್ಲ. ಚೈತನ್ಯ ರಹಿತ ಆತ್ಮ ಶರೀರವೆಲ್ಲಾ ವ್ಯಾಪಿಸಿರುವುದರಿಂದ, ತಾತ್ಕಾಲಿಕ ಮರಣವನ್ನು ಹೊಂದಿದ ಶರೀರವು ಬದಲಾವಣೆ ಹೊಂದುವುದಿಲ್ಲ. ಅಷ್ಟೇ ಅಲ್ಲದೆ ಕೊಳೆತುಹೋಗುವುದಿಲ್ಲ, ಕಾಲುಗಳು, ಕೈಗಳ ಕೀಲಿನಲ್ಲಿನ ನರಗಳು ಗಟ್ಟಿಯಾ ಗದಿರುವುದರಿಂದ ಕಾಲು, ಕೈಗಳು ಬಗ್ಗುತ್ತಿರುತ್ತವೆ. ಆತ್ಮ ತನ್ನ ಚೈತನ್ಯವನ್ನು ಮಾತ್ರ ಬ್ರಹ್ಮನಾಡಿಯೊಳಗೆ ಕಳುಹಿಸಿ, ತಾನು ಮಾತ್ರ ಶರೀರವೆಲ್ಲ ತಾತ್ಕಾಲಿಕ ಮರಣದಲ್ಲಿ ಇರುತ್ತದೆಂದು ತಿಳಿಯಬೇಕು. ಅಂತಹ ಕೆಟ್ಟುಹೋಗದ ಶರೀರದಲ್ಲಿಯೂ, ಕಾಲು ಕೈಗಳ ಕೀಲುಗಳು ಬಗ್ಗುತ್ತಿರುವ ಶರೀರಗಳನ್ನು ನೋಡಿದ ಹಿರಿಯರು ಇವರು ತಾತ್ಕಾಲಿಕ ಮರಣವನ್ನು ಹೊಂದಿದ್ದಾರೆಂದು ಗ್ರಹಿಸಿ ಅಂಥವರನ್ನೇ ಪುನಃ ಎಬ್ಬಿಸಿದ್ದಾರೆ. ಒಬ್ಬ ವ್ಯಕ್ತಿ ಮರಣಿಸಿದಾಗ ಜೀವಾತ್ಮ ಅವಸಾನ ದಶೆಹೊಂದಿ ಮರಣಿಸಿದರೆ, ಅದು ಪೂರ್ತಿ ಮರಣ (ಕಾಲಮರಣ) ಆಗುತ್ತದೆ. ಅವಸಾನ ದಶೆ ಹೊಂದದಂತೆ ಮರಣಿಸಿದರೆ, ಅದು ಅಕಾಲಮರಣ ವಾದರೂ ಆಗಬಹುದು ಇಲ್ಲವೆ ತಾತ್ಕಾಲಿಕ ಮರಣವಾದರು ಆಗಬಹುದು. ಕಾಲಮರಣದಲ್ಲಾಗಲಿ, ಅಕಾಲಮರಣದಲ್ಲಾಗಲಿ ಆತ್ಮ, ಜೀವಾತ್ಮ ಶರೀರವನ್ನು ಬಿಟ್ಟುಹೋಗುತ್ತದೆ. ಹಾಗೆಯೆ ಅಕಾಲಮರಣದಲ್ಲಾಗಲಿ, ತಾತ್ಕಾಲಿಕ ಮರಣದಲ್ಲಾಗಲಿ ಅವಸಾನದಶೆ ಇರುವುದಿಲ್ಲ. ತಾತ್ಕಾಲಿಕ ಮರಣ ಹೊಂದಿದ ಶರೀರ ಕೆಟ್ಟುಹೋಗುವುದಿಲ್ಲ. ಆದ್ದರಿಂದ ಆತನು ಪುನಃ ಬದುಕುವುದಕ್ಕೆ ಅವಕಾಶ ಇದೆ. ಕಾಲಮರಣದಲ್ಲಿ ಎಂದರೆ ಪೂರ್ತಿ ಮರಣದಲ್ಲಿ ಆತ್ಮ ಸ್ಥೂಲ, ಸೂಕ್ಷ್ಮ ಶರೀರಗಳನ್ನು ಬಿಟ್ಟು ಹೋಗುತ್ತಿದೆ. ಅಕಾಲಮರಣದಲ್ಲಿ ಆತ್ಮ ಸ್ಥೂಲ ಶರೀರವನ್ನು ಮಾತ್ರ ಬಿಟ್ಟು ಸೂಕ್ಷ್ಮ ಶರೀರದಲ್ಲಿ ಇರುತ್ತದೆ. ತಾತ್ಕಾಲಿಕ ಮರಣದಲ್ಲಿ ಆತ್ಮ ಸ್ಥೂಲ ಶರೀರವನ್ನಾಗಲಿ, ಸೂಕ್ಷ್ಮಶರೀರವನ್ನಾಗಲಿ ಬಿಡುವುದಿಲ್ಲವೆಂದು ತಿಳಿಯಬೇಕು. ಇದರಿಂದ ಮೂರನೆ ಮರಣವನ್ನು ಹೊಂದಿದ ಶರೀರ ಬದುಕಿಯೇ ಇದೆಯೆಂದು ಹೇಳಬಹುದು.

**(ಮಂಜು ಸಮುದ್ರದಲ್ಲಿ 1993ನೇ ವರ್ಷ ನಡೆದ ಸಂಘಟನೆ)**

ಜನವರಿ 2011, 30 ನೇ ತಾರೀಖು ನೇಷನಲ್ ಜಿಯೋಗ್ರಫಿಕ್ ಎನ್ನುವ ಟಿವಿ. ಛಾನಲ್‌ನಲ್ಲಿ "ಟ್ರು ಸ್ಟೋರೀಸ್" ಎಂಬ ಹೆಸರಿನಿಂದ (Against All Odds) ಎನ್ನುವ ಸಂಘಟನೆ ಪ್ರಸಾರವಾಗಿದೆ. ಅದರಲ್ಲಿ ಹತ್ತು ಜನರಿಂದ ಕೂಡಿದ ಪರಿಶೋಧನಾ ಬೃಂದವು ಮಂಜಿನಿಂದ ಕೂಡಿರುವ ಸಮುದ್ರದ ಮೇಲೆ ಪ್ರಯಾಣಿಸುತ್ತಾ ಇರುತ್ತದೆ. ಮಂಜಿನ ಮೇಲೆ ಜಾರುವ ಚಿಕ್ಕ ಚಿಕ್ಕ ವಾಹನಗಳ ಮೇಲೆ ಅವರು ಪ್ರಯಾಣಿಸುತ್ತಿರುತ್ತಾರೆ. ಒಬ್ಬೊಬ್ಬರು ಒಂದೊಂದು ವಾಹನದ ಮೇಲೆ ಮಂಜು ಸಮುದ್ರದ ಮೇಲೆ ಗಂಟೆಗೆ ಹತ್ತು, ಹದಿನೈದು ಕಿಲೋಮೀಟರ್‌ಗಳ ವೇಗದಿಂದ ಹೋಗುತ್ತಿರುತ್ತಾರೆ. ಮೇಲೆ ಮಂಜು ಕಲ್ಲಿನಂತೆ ಹೆಸರಿಗೆ ಕಾಣಿಸುತ್ತಿದ್ದರೂ, ಮೂರು ಇಲ್ಲವೆ ನಾಲ್ಕು ಅಡಿಗಳ ಆಳದಲ್ಲಿ ತಣ್ಣನೆಯ ನೀರಿನ ಸಮುದ್ರ ಇದೆ. ಎಲ್ಲಿಯಾದರು ಕೆಲವು ಕಡೆ ಸಿಗಿಡೆ ಮೀನು ಹೊರಗೆ ಬರುವುದಕ್ಕೆ ಮಂಜುಗಡ್ಡೆಯನ್ನು ರಂಧ್ರ ಮಾಡಿಕೊಂಡಿರುತ್ತಿದ್ದವು. ಅಂತಹ ರಂಧ್ರಗಳನ್ನು ಜಾಗ್ರತೆಯಾಗಿ ಗಮನಿಸುತ್ತಾ ಆ ಪರಿಶೋಧಕ ಬೃಂದವು ಮುಂದಕ್ಕೆ ಸಾಗುತ್ತಿದ್ದರು. 1993 ಮಾರ್ಚ್ 21ನೇ ತಾರೀಖು ರಾತ್ರಿ ಹತ್ತು ಗಂಟೆಗಳ ಸಮಯದಲ್ಲಿ ಆ ಬೃಂದದಲ್ಲಿನ ಒಬ್ಬ ವ್ಯಕ್ತಿ ಆಕಸ್ಮಿಕವಾಗಿ ಸಿಗಿಡೆ ಮೀನುಗಳು ಮಾಡಿದ ರಂಧ್ರದಲ್ಲಿ ತನ್ನ ವಾಹನಜೊತೆ ಸಮುದ್ರದೊಳಗೆ ಬಿದ್ದುಹೋಗಿದ್ದಾನೆ. ಸುಮಾರು ಮೂರು ಅಡಿಗಳ ಮಂಜುಗಡ್ಡೆ ಕೆಳಗೆ ತಣ್ಣನೆಯ ನೀರಿನಲ್ಲಿ ಬಿದ್ದುಹೋದ ವ್ಯಕ್ತಿ ಹೊರಗೆ ಬರಲಾರದೆ ಹೋಗಿದ್ದಾನೆ. ಕೆಲವು ನಿಮಿಷಗಳಿಗೆ ಆತನು ನೀರಿನಲ್ಲಿಯೆ ಸತ್ತುಹೋಗುವುದು ನಡೆದಿದೆ. 10 ಗಂಟೆ 20 ನಿಮಿಷಗಳಿಗೆ ಆತನನ್ನು ಹುಡುಕುವುದಕ್ಕೆ ಆತನ ಬೃಂದದವರು ಪ್ರಾಂಭಿಸಿದ್ದಾರೆ. ಸುಮಾರು ಒಂದು ಗಂಟೆ ಸಮಯ ಹುಡಿಕಿದರೆ 11 ಗಂಟೆಗಳ 20 ನಿಮಿಷಗಳ ಸಮಯದಲ್ಲಿ ಸಿಕ್ಕಿದನು.

ಅಷ್ಟೊತ್ತಿಗೆ ಆತನು ಮರಣಿಸಿ ಒಂದು ಗಂಟೆ ವರೆಗೂ ನೀರಿನಲ್ಲಿಯೇ ಇದ್ದಾನೆ. ಆತನನ್ನು ಹೊರಗೆ ತಂದು 14 ಕಿಲೋಮೀಟರ್‌ಗಳ ದೂರದಲ್ಲಿರುವ

ಆಸ್ಪತ್ರೆಗೆ ಸೇರಿಸುವುದಕ್ಕೆ 32 ನಿಮಿಷಗಳು ಹಿಡಿಸಿದೆ. ಡಾಕ್ಟರ್ಸ್ ಬಂದು ನೋಡುವಷ್ಟರಲ್ಲಿ 8 ನಿಮಿಷಗಳು ಹಿಡಿಸಿದೆ. 12 ಗಂಟೆಗಳಿಗೆ ಡಾಕ್ಟರ್ಸ್ ಬಂದು ಆತನಿಗೆ ಪ್ರಾಣ ಇಲ್ಲದಿರುವುದು ಗಮನಿಸಿದ್ದಾರೆ. ಆತನ ಶರೀರದಲ್ಲಿ ರಕ್ತ ಗಡ್ಡೆಕಟ್ಟಿಹೋಗಿ ಚರ್ಮವು ನೀಲಿಬಣ್ಣವಾಗಿ ಬದಲಾಗಿರುವುದು ಗಮನಿಸಿದ್ದಾರೆ. ಗುಂಡಿಗೆಯೂ (ಹಾರ್ಟ್) ಪೂರ್ತಿ ನಿಂತುಹೋಗಿ ನಾಡಿ ಇಲ್ಲದಂತೆ ಹೋಗಿದೆ. ಆಧುನಿಕ ಭೌತಿಕಶಾಸ್ತ್ರದ ಪ್ರಕಾರ ಎಲ್ಲಾ ಪರೀಕ್ಷೆಗಳು ಆತನು ಮರಣಿಸಿದಂತೆ ಲೆಕ್ಕಿಸಲ್ಪಟ್ಟಿದೆ. ಆಗಲೆ ಆತನು ಮರಣಿಸಿ ಸುಮಾರು ಎರಡುವರೆಯಿಂದ ಮೂರು ಗಂಟೆಗಳ ಕಾಲವಾದಂತೆ ನಿರ್ಧಾರಕ್ಕೆ ಬಂದಿದ್ದಾರೆ. ಆದರೆ ಅವರಲ್ಲಿ ಒಬ್ಬ ಡಾಕ್ಟರ್‌ಗೆ ಒಳಗೆ ಒಂದು ಪ್ರೇರಣೆ ನಡೆದು ಸತ್ತುಹೋದ ಆ ವ್ಯಕ್ತಿಗೆ ವೈದ್ಯ ಪ್ರಯತ್ನ ಮಾಡಬೇಕೆಂದುಕೊಂಡಿದ್ದಾನೆ. ಆ ವಿಧವಾಗಿ ಯಾವ ಡಾಕ್ಟರ್ ಅಂದುಕೊಳ್ಳುವುದಿಲ್ಲ. ಆದರೂ ಡಾಕ್ಟರ್, ಮರಣಿಸಿದ ವ್ಯಕ್ತಿಗೆ ವೈದ್ಯ ಮಾಡಬೇಕೆಂದುಕೊಳ್ಳವುದು ಆತ್ಮ ಪ್ರೇರಣೆ ಎಂದು ನಾನು ಅಂದುಕೊಳ್ಳುತ್ತಿದ್ದೇನೆ. ವೈದ್ಯ ಮಾಡಬೇಕೆಂದುಕೊಂಡ ಡಾಕ್ಟರ್ ಮೆದುಳಿನಲ್ಲಿ ಯಾವ ಯೋಚನೆ ತಿಳಿಸಲಾಗಿದೆಯೋ ಅದರ ಪ್ರಕಾರವಾಗಿ ಆತನು ಆ ಶರೀರಕ್ಕೆ ವೈದ್ಯ ಮಾಡಿದ್ದಾನೆ. ಅದು ದೊಡ್ಡ ಆಸ್ಪತ್ರೆ ಆಗಿರುವುದರಿಂದ, ಅದರಲ್ಲಿ ಎಲ್ಲಾ ವೈದ್ಯ ಸೌಕರ್ಯಗಳು ಇರುವುದು, ರಕ್ತವನ್ನು ಬದಲಿಸುವ ಯಂತ್ರದಿಂದ ಹಿಡಿದು ಸಹಾಯಕ್ಕೆ ಬೇಕಾದ ಎಲ್ಲ ಯಂತ್ರಗಳು ಇರುವುದು ವಿಶೇಷ. ಎಲ್ಲ ಯಂತ್ರಗಳು ಇರುವುದರಿಂದ ವೈದ್ಯ ಮಾಡಬೇಕೆಂದುಕೊಂಡ ಡಾಕ್ಟರ್ ಧೈರ್ಯವಾಗಿ ತನ್ನ ಕೆಲಸವನ್ನು ಸಾಗಿಸಿದನು. ಆತನ ಬೃಂದದಲ್ಲಿ ಉಳಿದ ಹತ್ತುಜನ ಡಾಕ್ಟರ್‌ಗಳು ಕೆಲಸ ಮಾಡಿದರು.

ಡಾಕ್ಟರ್ಸ್ ಎಲ್ಲರೂ ಸೇರಿ ಎರಡು ಗಂಟೆಗಳ ಕಾಲ ಶ್ರಮಿಸಿ ವೈದ್ಯ ಮಾಡಿದ್ದಾರೆ. ಹಾಗೆ ಮಾಡಿದಾಗ ಇದ್ದಕ್ಕಿದ್ದಂತೆ ಅಲ್ಲಿಯವರೆಗೂ ಯಾವ ಚಲನೆ ಇಲ್ಲದಂತೆ ಮರಣಿಸಿದ ಶರೀರದಲ್ಲಿ ಗುಂಡಿಗೆ ಬಡಿದುಕೊಳ್ಳುವುದು ಪ್ರಾರಂಭಿಸಿದೆ. ಗುಂಡಿಗೆ (ಹಾರ್ಟ್) ಒಂದು ಪದ್ಧತಿಯಾಗಿ ಬಡಿದುಕೊಳ್ಳದೆ

ಇಷ್ಟಬಂದಂತೆ ಹೆಚ್ಚು ಕಡಿಮೆ ಬಡಿದುಕೊಳ್ಳುವುದನ್ನು ಗ್ರಹಿಸಿದ ಡಾಕ್ಟರ್ಸ್ ತಕ್ಷಣ ಮತ್ತೊಂದು ಯಂತ್ರದ ಸಹಾಯದಿಂದ ಗುಂಡಿಗೆಯನ್ನು ಸಕ್ರಮವಾಗಿ ಬಡಿದುಕೊಳ್ಳುವಂತೆ ಮಾಡಿದ್ದಾರೆ. ಅಲ್ಲಿಗೆ ಎಲ್ಲವು ಸರಿಹೋದಂತೆ ಆಗಿದೆ. ಗುಂಡಿಗೆ (ಹಾರ್ಟ್) ಬಡಿದುಕೊಳ್ಳುವುದು, ರಕ್ತ ಪ್ರವಹಿಸುವುದು, ಶ್ವಾಸ ಆಡುವುದು, ನಾಡಿ ಸರಿಯಾಗಿ ಇರುವುದು ನಡೆದಿದೆ. ಈ ವಿಧವಾಗಿ 2 ಗಂಟೆಗಳ 12 ನಿಮಿಷಗಳ ಕಾಲ ವೈದ್ಯ ಮಾಡಿದಾಗ ಮರಣಿಸಿದ ವ್ಯಕ್ತಿ ಪುನಃ ಬದುಕುವುದು ನಡೆದಿದೆ. ಅಲ್ಲಿಗೆ ಆತನು ಐದು ಗಂಟೆಗಳು ಮರಣಿಸಿ ಪುನಃ ಬದುಕುವುದು ನಡೆದಿದೆ. ಅಲ್ಲಿನ ಡಾಕ್ಟರ್ಸ್ ತಮ್ಮ ವೈದ್ಯ ಮರಣವನ್ನೇ ಜಯಿಸಿದೆ ಎಂದು ಸಂತೋಷಪಟ್ಟಿದ್ದಾರೆ. ಈ ಸಂಘಟನೆ ಹಿಂದೆ ಯಾವಾಗಲೋ ನಡೆದಿರುವುದಲ್ಲ. ಇಲ್ಲಿಗೆ 18 ವರ್ಷಗಳ ಕೆಳಗೆ 1993ನೇ ವರ್ಷ ಮಾರ್ಚ್ 21 ತಾರೀಖು ನಡೆದ ಸಮಾಚಾರವನ್ನು ಯಥಾರ್ಥ ಕಥೆಗಳು (TRUE STORIES) ಎನ್ನುವ ಸಮಾಚಾರದ ಹೆಸರಿನಿಂದ ಟಿವಿ ಛಾನಲ್‌ನಲ್ಲಿ ಪ್ರಸಾರ ಮಾಡಿದ್ದಾರೆ. ಇದು ಆಧುನಿಕ ವೈದ್ಯದ ಮೂಲಕ, ಆಧುನಿಕ ಡಾಕ್ಟರ್ಸ್ ಮುಂದೆ ನಡೆದ ಸಂಘಟನೆ. ಆದ್ದರಿಂದ ಇದನ್ನು ಯಾವ ಹೇತುವಾದಿ, ಯಾವ ನಾಸ್ತಿಕವಾದಿ ಅಲ್ಲ ಎನ್ನುವುದಕ್ಕಾಗಲಿ, ಇದು ಮೂಢನಂಬಿಕೆ ಎಂದು ಅಲ್ಲಗಳೆಯುವುದಕ್ಕಾಗಲೀ ಅವಕಾಶ ಇಲ್ಲ.

## (ಜಮ್ಮು, ಕಾಶ್ಮಿರ್‌ನಲ್ಲಿನ ಅಬ್ದುಲ್ ಅಜೀಜ್ ಕಥೆ)

2009 ಡಿಸೆಂಬರ್ 7ನೇ ತಾರೀಖು ಟಿವಿ9 ನಲ್ಲಿ ಮಧ್ಯಾಹ್ನ 1–30 ನಿಮಿಷಗಳಿಗೆ ಒಂದು ಕಥನ ಪ್ರಸಾರವಾಗಿದೆ. ಅದೇನೆಂದರೆ! ಅಲ್ಲಿಗೆ ವಾರ ದಿನಗಳ ಕೆಳಗೆ ಎಂದರೆ 2009 ನವಂಬರ್, 30ನೇ ತಾರೀಖು ಜಮ್ಮು ಕಾಶ್ಮೀರ್‌ದಲ್ಲಿನ ರಾಜೌರಿ ಎನ್ನುವ ಗ್ರಾಮದಲ್ಲಿ ಅಬ್ದುಲ್ ಅಜೀಜ್ ಎನ್ನುವ 60 ವರ್ಷಗಳ ಮುದುಕನು ಮರಣಿಸಿದ್ದಾನೆ. ಆತನು ಮುಸ್ಲಿಮ್ ಆಗಿರುವುದರಿಂದ ಇಸ್ಲಾಮ್ ಸಂಪ್ರದಾಯದ ಪ್ರಕಾರ ಆತನನ್ನು ಭೂಮಿಯಲ್ಲಿ ಊತಿಡುವುದು ನಡೆದಿದೆ. ಆತನನ್ನು ಮಣ್ಣು ಮಾಡಿದ ಮೂರು ದಿನಗಳಿಗೆ ಆತನು

ಸಾಧಾರಣವಾಗಿ ಮರಣಿಸಲಿಲ್ಲವೆಂದು, ಯಾರೋ ಹತ್ಯ ಮಾಡಿದ್ದಾರೆನ್ನುವ ಆರೋಪಣೆ ಪೊಲೀಸರಿಗೆ ಸೇರಿದೆ. ತಕ್ಷಣ ಪೊಲೀಸರು ಕೇಸು ಬರೆದುಕೊಂಡು ಸ್ಮಶಾನಕ್ಕೆ ಹೋಗಿ ಅಬ್ದುಲ್ ಅಜೀಜ್ ಶವವನ್ನು ಬಂಧುಗಳ ಸಮಕ್ಷಮದಲ್ಲಿಯೇ ಹುಡುಕಿ ತೆಗೆದರು. ಹುಡುಕಿ ತೆಗೆದ ಅಬ್ದುಲ್ ಅಜೀಜ್ ಶರೀರವನ್ನು ಪೋಸ್ಟುಮಾರ್ಟಮ್ (ಶವಪರೀಕ್ಷೆ) ಗೋಸ್ಕರ ಸರ್ಕಾರಿ ಆಸ್ಪತ್ರೆಗೆ ಕಳುಹಿಸಿದ್ದಾರೆ. ಅದರಲ್ಲಿನ ಡಾಕ್ಟರ್ ಶವಪರೀಕ್ಷೆ ಮಾಡಲು ಪ್ರಾರಂಭಮಾಡಿದ್ದಾನೆ. ಮೊದಲು ತಲೆ ಭಾಗವನ್ನು ಪರೀಕ್ಷಿಸುವುದಕ್ಕೆ ತಲೆಮೇಲೆ ಚರ್ಮವನ್ನು ತೆಗೆಯುವುದಕ್ಕೆ ಕತ್ತಿಯಿಂದ ತಲೆ ಮೇಲೆ ಹೊಡೆಯುವುದು ನಡೆದಿದೆ. ತಲೆಮೇಲೆ ಗಾಯವಾಗಿದೆ. ಆಗ ಎಲ್ಲರಿಗೂ ಆಶ್ಚರ್ಯವಾಗುವಂತೆ ಅಲ್ಲಿಯವರೆಗು ಮರಣಿಸಿದ ಅಬ್ದುಲ್ ಅಜೀಜ್ ಎದ್ದು ಕುಳಿತುಕೊಂಡು ನನ್ನೇನು ಮಾಡುತ್ತಿದ್ದೀರೆಂದು ಪ್ರಶ್ನಿಸಿದನು. ಆಗ ಆತನು ಎದ್ದು ಕೇಳುವುದು ಡಾಕ್ಟರ್‌ಗಳಿಗೆ ನಂಬುವುದಕ್ಕೆ ಆಗಲಿಲ್ಲ. ಆದರೂ ಡಾಕ್ಟರ್‌ಗಳು ಆಶ್ಚರ್ಯವಾಗಿ ಆತನು ಕೇಳಿದ ಪ್ರಶ್ನೆಗಳಿಗೆ ನಿನ್ನನ್ನು ಶವಪರೀಕ್ಷೆ ಮಾಡುತ್ತಿದ್ದೇವೆ ಎಂದು ಹೇಳಿದರು. ಅದಕ್ಕೆ ಅಬ್ದುಲ್ ಅಜೀಜ್ ನಾನು ಬದುಕೇ ಇದ್ದೀನಲ್ಲವೆ! ಎಂದನು. ಅಷ್ಟರಲ್ಲಿ ಡಾಕ್ಟರ್‌ರವರು ಅಬ್ದುಲ್ ಅಜೀಜ್ ಸಂಬಂಧಿಕರಿಗೆ ವಿಷಯವನ್ನು ತಿಳಿಸಿದಾಗ, ಹೊರಗಿರುವ ಸಂಬಂಧಿಕರು ಬಂದು ಆತನನ್ನು ಕರೆದುಕೊಂಡು ಹೋಗುವುದು ನಡೆದಿದೆ. ಮೂರು ದಿನಗಳ ಕೆಳಗೆ ಅಬ್ದುಲ್ ಅಜೀಜ್ ಮರಣಿಸಿದಾಗ ಹದಿನೈದು ನಿಮಿಷಗಳ ನಂತರ ಪರೀಕ್ಷಿಸಿ ನೋಡಿ ಆತನು ಮರಣಿಸಿದಂತೆ ಹೇಳಿದ್ದೇನೆಂದು ಅಜೀಜ್ ವಿಷಯದಲ್ಲಿ ಅದ್ಭುತ ನಡೆದಿದೆ ಎಂದು ಡಾಕ್ಟರ್ ಹೇಳುವುದು ನಡೆದಿದೆ. ರಾಜೌರಿ ಗ್ರಾಮ ಪ್ರಜೆಗಳು ಸಹ ತಮ್ಮ ಕೈಗಳಿಂದ ಮಣ್ಣು ಮಾಡಿದ ಅಬ್ದುಲ್ ಅಜೀಜ್ ಮೂರು ದಿನಗಳ ನಂತರ ಬದುಕಿ ಬರುವುದೇನೆಂದು ಆಶ್ಚರ್ಯವನ್ನು ವ್ಯಕ್ತ ಪಡಿಸಿದ್ದಾರೆ. ಈ ಸಂಘಟನೆ ನಡೆದು ಇಲ್ಲಿಗೆ ಕೇವಲ ಒಂದು ವರ್ಷ ಮೂರು ತಿಂಗಳು ಮಾತ್ರವೆ ಆಗುತ್ತಿದೆ. ಈ ವಿಷಯವನ್ನು ಎಲ್ಲರಿಗೂ ತಿಳಿಯುವಂತೆ ಆ ದಿನವೆ ಟೀವಿ ಛಾನಲ್‌ಗಳು ಎಲ್ಲಾ ಪ್ರಸಾರ ಮಾಡಿವೆ. ಈ ಸಂಘಟನೆಯೂ ಸಹ ಡಾಕ್ಟರ್‌ಗಳ ಸಮಕ್ಷಮದಲ್ಲಿಯೆ ನಡೆದಿದೆ.

ಆದ್ದರಿಂದ ಯಾರು ಇದನ್ನು ಖಂಡಿಸುವುದಕ್ಕಾಗಲಿ, ಮೂಢನಂಬಿಕೆ ಎನ್ನುವುದಕ್ಕಾಗಲಿ ಸಾಧ್ಯವಿಲ್ಲ.

## (ವಿಶಾಖ ಜಿಲ್ಲೆಯಲ್ಲಿ ನಡೆದ ಒಂದು ಸಂಘಟನೆ)

ವಿಶಾಖಜಿಲ್ಲೆಯಲ್ಲಿ ಅರಕುಲೋಯ ಪ್ರಾಂತಕ್ಕೆ ಹೋಗುವ ದಾರಿಯಲ್ಲಿ ಶೃಂಗವರಪುಕೋಟ ಎನ್ನುವ ಊರು ಇದೆ. ಶೃಂಗವರಪುಕೋಟ ಮಂಡಲದಲ್ಲಿ ಅಲ್ಲಿಗೆ 12 ಕಿಲೋಮೀಟರ್‌ಗಳ ದೂರದಲ್ಲಿ ಸಾರೆಪುರ ಎನ್ನುವ ಗ್ರಾಮವು ಇದೆ. ಸಾರೆಪುರ ಗ್ರಾಮದಲ್ಲಿ 67 ವರ್ಷ ವಯಸ್ಸಿರುವ ಸಮುದ್ರಮ್ಮ ಎನ್ನುವ ಹೆಸರಿರುವ ಹೆಂಗಸು ಇದ್ದಳು. ಆಕೆಗೆ ಸುಮಾರು ಹತ್ತು ವರ್ಷಗಳಿಂದ ಹೈಬಿಪಿ, ಮತ್ತು ಸುಗರ್‌ವ್ಯಾಧಿ ಇತ್ತು. ಆಕೆ ಶೃಂಗವರಪು ಕೋಟೆಯಲ್ಲಿ ಸೀನಿಯರ್ ಡಾಕ್ಟರ್ ಆದ ಧರ್ಮಲಿಂಗಾಚಾರಿ ಹತ್ತಿರ ವೈದ್ಯ ಮಾಡಿಸಿಕೊಳ್ಳುತ್ತಿದ್ದಳು. ಎಂ.ಬಿ.ಬಿ.ಯಸ್ ಡಾಕ್ಟರ್ ಧರ್ಮಲಿಂಗಾಚಾರಿಯವರು ಒಳ್ಳೆಯ ಹೆಸರುವಾಸಿಯಾದ ಸುಮಾರು 60 ವರ್ಷ ವಯಸ್ಸಿರುವ ಅನುಭವಜ್ಞನು. ಇಲ್ಲಿ ಎರಡು ವರ್ಷಗಳ ಕೆಳಗೆ ಒಂದುದಿನ ಸಾಯಂಕಾಲ 6 ಗಂಟೆಗಳ ಸಮಯದಲ್ಲಿ ಸಮುದ್ರಮ್ಮನನ್ನು ಡಾಕ್ಟರ್ ಧರ್ಮಲಿಂಗಾಚಾರಿ ಹತ್ತಿರಕ್ಕೆ ತೆಗೆದುಕೊಂಡು ಬರುವುದು ನಡೆದಿದೆ. ಅದಕ್ಕಿಂತ ಮೊದಲು ಪ್ರಭುತ್ವ ಆಸ್ಪತ್ರೆಯಲ್ಲಿ ಮರಣಿಸಿದ್ದಾಳೆಂದು ಹೇಳಿದ ನಂತರ ಅಲ್ಲಿಗೆ ತೆಗೆದುಕೊಂಡು ಬಂದಿದ್ದಾರೆ. ಆಗ ಡಾಕ್ಟರ್‌ರವರು ಆಕೆಯನ್ನು ನೋಡಿದಾಗ ಆಕೆಯ ಶರೀರದಲ್ಲಿ ಬಿ.ಪಿ ಆಗಲಿ, ನಾಡಿಯಾಗಲಿ ಸ್ವಲ್ಪವೂ ಸಹ ಇರಲಿಲ್ಲ. ಆಕೆಗೆ ಶ್ವಾಸವಾಗಲಿ, ನಾಡಿ (ಪಲ್ಸ್) ಆಗಲಿ ಇಲ್ಲದಿರುವಾಗ ಆಕೆಯನ್ನು ಮರಣಿಸಿದಂತೆ ನಿರ್ಧಾರಿಸಿದ ಡಾಕ್ಟರ್ "ಮನೆಗೆ ತೆಗೆದುಕೊಂಡು ಹೋಗಿ, ಈಕೆ ಸತ್ತುಹೋಗಿದ್ದಾಳೆ, ಈಕೆಗೆ ವೈದ್ಯದ ಅವಶ್ಯ ಇಲ್ಲ ಎಂದಿದ್ದಾರೆ." ಆಗ ಅವರು 12 ಕಿಲೋಮೀಟರ್‌ಗಳ ದೂರದಲ್ಲಿರುವ ಅವರ ಗ್ರಾಮಕ್ಕೆ ತೆಗೆದುಕೊಂಡು ಹೋದರು. ಆಗ ರಾತ್ರಿ ಆಗಿರುವುದರಿಂದ ಬೆಳಗ್ಗೆ ಆಕೆಯನ್ನು ಮಣ್ಣು ಮಾಡಬೇಕೆಂದುಕೊಂಡರು. ಬೆಳಗಾಗುತ್ತಲೇ ಮಳೆ ಪ್ರಾರಂಭವಾಗಿ ಎರಡು ದಿನಗಳು ಬಿಡದಂತೆ

ಬೀಳುವುದರಿಂದ ಹೊರಗೆ ಹೋಗುವುದಕ್ಕೆ ಅವಕಾಶ ಇಲ್ಲದಂತೆಹೋಗಿದೆ. ಸಮುದ್ರಮ್ಮನ ಶವವನ್ನು ಹಾಗೆಯೆ ಮೂರುದಿನಗಳು ವರಾಂಡದಲ್ಲಿಯೇ ಇಟ್ಟಿದ್ದಾರೆ. ಮೂರುದಿನಗಳ ನಂತರ ನಾಲ್ಕನೆಯದಿನ ಬೆಳಗ್ಗೆ ಆಕೆ ಎದ್ದು ಕುಳಿತುಕೊಂಡು ಎಲ್ಲರನ್ನು ಕರೆದಳಂತೆ. ಆಗ ಆಕೆಯ ಸಂಬಂಧಿಕರು ಆಕೆ ಬದುಕಿದಂತೆ ಗ್ರಹಿಸಿ ತಕ್ಷಣ ಡಾಕ್ಟರ್ ಧರ್ಮಲಿಂಗಾಚಾರಿಯವರಿಗೆ ಫೋನ್ ಮಾಡುವುದು ನಡೆದಿದೆ. ಹದಿನೈದು ದಿನಗಳು ಕಳೆದ ನಂತರ ಆಕೆಯನ್ನು ಡಾಕ್ಟರ್‌ರವರ ಹತ್ತಿರಕ್ಕೆ ಕರೆದುಕೊಂಡು ಬರುವುದು ನಡೆದಿದೆ. ಆ ಡಾಕ್ಟರ್ ನೀನು ಮರಣಿಸಿ ಮೂರು ದಿನಗಳು ಹಾಗೇ ಇದ್ದೀಯಾ ಅಲ್ವಾ! ಆಗ ನಿನಗೆ ಯಮಭಟರಾಗಲಿ, ಯಮಲೋಕವಾಗಲಿ ಏನಾದರು ಕಾಣಿಸಿವೆಯಾ ಎಂದು ಕೇಳಿದ್ದಾನೆ. ಅದಕ್ಕೆ ಆಕೆ ನನಗೆ ಏನು ಕಾಣಿಸಲಿಲ್ಲ ಎಂದು ಹೇಳಿದಳಂತೆ. ಈ ಸಂಘಟನೆಯೂ ಸಹ ಒಬ್ಬ ಡಾಕ್ಟರ್ ಸಮಕ್ಷಮದಲ್ಲಿಯೇ ಎರಡು ವರ್ಷಗಳ ಕೆಳಗೆ ನಡೆದಿದೆ. ಆದ್ದರಿಂದ ಇದನ್ನು ಸಹ ಯಾರೂ ಅಲ್ಲವೆನ್ನುವುದಕ್ಕಾಗಲಿ, ಮೂಢನಂಬಿಕೆ ಎನ್ನುವುದಕ್ಕಾಗಲಿ ಸಾಧ್ಯವಿಲ್ಲ.

ನೂರು ವರ್ಷಗಳ ಕೆಳಗೆ ಮಾಸ್ಟರ್ ಸಿ.ವಿ.ವಿ ರಾಮನ್‌ರವರು ಕೋಯಂಬತ್ತೂರಿನಲ್ಲಿ ದತ್ತು ತಾಯಿಯನ್ನು ಬದುಕಿಸಿದಂತೆ ಸಮಾಚಾರವಿದ್ದರೂ ಆತನು ಹೇಗೆ ಬದುಕಿಸಿದ್ದಾನೋ ಪೂರ್ತಿಯಾಗಿ ತಿಳಿದಿಲ್ಲ. ಆದರೆ 1993ನೇ ವರ್ಷದಲ್ಲಿ ಮಂಜು ನೀರಿನ ಸಮುದ್ರದಲ್ಲಿ ಮುಳುಗಿ ಮರಣಿಸಿದ ವ್ಯಕ್ತಿಯನ್ನು ಐದು ಗಂಟೆಗಳ ನಂತರ ಡಾಕ್ಟರ್‌ಗಳು ಬದುಕಿಸಿದ್ದಾರೆ. ಆತನಿಗೆ ವೈದ್ಯ ಮಾಡಿ ಬದುಕಿಸಿದ್ದಾರೆಂದು ತಿಳಿದಿದೆ. ವರ್ಷದ ಕೆಳಗೆ ಜಮ್ಮು ಕಾಶ್ಮೀರದಲ್ಲಿ ಮರಣಿಸಿದ ಅಬ್ದುಲ್ ಅಜೀಜ್ ಮೂರು ದಿನಗಳ ನಂತರ ವೈದ್ಯ ಇಲ್ಲದೇ ಎದ್ದಿದ್ದಾನೆ. ವಿಶಾಖ ಜಿಲ್ಲೆ ಶೃಂಗವರಪುಕೋಟ ಸಮೀಪದಲ್ಲಿ ನಡೆದ ಸಂಘಟನೆಯಲ್ಲಿಯೂ ಸಹ ಸತ್ತುಹೋದ ಸಮುದ್ರಮ್ಮ ಯಾವ ವೈದ್ಯವೂ ಇಲ್ಲದೆ ಮೂರು ದಿನಗಳ ನಂತರ ಏಳುವುದು ನಡೆದಿದೆ. ಶ್ರೀಕೃಷ್ಣನು, ಯೇಸು ಇದ್ದ ಸಾವಿರಾರು ವರ್ಷಗಳಲ್ಲಾಗಲಿ, ಪ್ರಸ್ತುತ ಕಾಲದಲ್ಲಾಗಲಿ, ಮಧ್ಯ ಕಾಲದಲ್ಲಾಗಲಿ ಎಷ್ಟೋ

ಜನ ತಾತ್ಕಾಲಿಕ ಮರಣವನ್ನು ಹೊಂದುವುದು, ಪುನಃ ಮೇಲೇಳುವುದು ನಡೆದಿದೆ. ತಾತ್ಕಾಲಿಕ ಮರಣ ವಿಷಯವನ್ನು ಇಂದಿನ ಕಾಲದಲ್ಲಿ ನಾವು ಗುರ್ತಿಸಲಾರದೆ ಹೋದರೂ, ಆ ಮೂರನೇ ಮರಣವೊಂದು ಇದೆ ಎಂದು ತಿಳಿಯುತ್ತಿದೆ. ಈಗಿನ ಕಾಲದಲ್ಲಿ ತಾತ್ಕಾಲಿಕ ಮರಣದ ವಿಷಯ ತಿಳಿಯದವರು ಸಹ, ಮನುಷ್ಯ ಸತ್ತುಹೋದಾಗ ಆತನ ಶವವನ್ನು ಅಂತ್ಯಕ್ರಿಯಗಳಿಗೆ ತೆಗೆದುಕೊಂಡು ಹೋಗುವ ಸಮಯದಲ್ಲಿ, ಇಳಿಸುವ ಕಣದ ಹತ್ತಿರ ಶವವನ್ನು ಇಳಿಸಿ ಆತನೇನಾದರು ಬದುಕಿದ್ದಾನೇನೋ ಎಂದು, ಮುಖಕ್ಕೆ ಮುಚ್ಚಿರುವ ಬಟ್ಟೆಯನ್ನು ತೆಗೆದುನೋಡುವುದು ನಡೆಯುತ್ತದೆ. ಅಷ್ಟೇ ಅಲ್ಲದೆ ಸತ್ತುಹೋದ ವ್ಯಕ್ತಿಯ ಹೆಸರನ್ನಿಟ್ಟು ಕರೆಯುವುದು, ಸತ್ತುಹೋದ ವ್ಯಕ್ತಿಯನ್ನು ತಟ್ಟಿ ಕರೆಯುವುದು ನಡೆಯುತ್ತದೆ. ಈ ಕಾಲದಲ್ಲಿ ಸಹ ಕೆಲವು ಪ್ರದೇಶಗಳಲ್ಲಿ ಶವವನ್ನು ಮಧ್ಯದಲ್ಲಿ ಇಳಿಸುವ ಸಂಪ್ರದಾಯ ಇರುವುದಲ್ಲದೆ ತಟ್ಟುವುದು ಕರೆಯುವುದು ಇದೆ. ಕೆಲವು ಪ್ರದೇಶಗಳಲ್ಲಿ ಇಂದೂ ಸಂಪ್ರದಾಯಗಳು ಅರ್ಥವಿಲ್ಲದಂತೆ ಇಳಿಸುವ ಕಣ ಒಂದರ ಆಚಾರ ಇಲ್ಲದಂತೆಹೋಗಿದೆ. **ಇಳಿಸುವ ಕಣದ(ಶವವನ್ನು ಮಧ್ಯದಲ್ಲಿ ಇಳಿಸುವ) ಆಚಾರವು ಜ್ಞಾನ ಸಂಬಂಧವಾದರೂ ಅದು ಈದಿನ ಇಲ್ಲದಂತೆ ಹೋಗಿದೆ**. ನಾಲ್ಕು ಜನ ಚಟ್ಟವನ್ನು ಹೊತ್ತುಕೊಂಡುಹೋಗುವುದು ಬಿಟ್ಟು, ನಾಲ್ಕು ಚಕ್ರಗಳ ಮೋಟಾರ್ ವಾಹನದ ಮೇಲೆ ಸತ್ತುಹೋದವರನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗುವುದು ನಡೆಯುತ್ತಿದೆ.

ಪೂರ್ವಕಾಲದಲ್ಲಿ ತಾತ್ಕಾಲಿಕ ಮರಣದ ವಿವರ ಮನುಷ್ಯರೆಲ್ಲರಿಗೂ ತಿಳಿಯದಿದ್ದರು, ಮೂರನೆ ಮರಣವಾದ ತಾತ್ಕಾಲಿಕ ಮರಣವನ್ನು ಹೊಂದಿದವರನ್ನು ಸಹ ಮನುಷ್ಯರು ತಿಳಿಯದೆ ಸ್ಮಶಾನಕ್ಕೆ ತೆಗೆದುಕೊಂಡು ಹೋಗುತ್ತಾರೆಂದು, ಅಂತಹ ಮರಣವನ್ನು ಹೊಂದಿದವರು ಯಾರಾದರು ಇದ್ದರೆ, ಇಳಿಸುವ ಸ್ಥಳದ ಹತ್ತಿರವಾದರು ಅವರು ಪುನಃ ಏಳುವುದಕ್ಕೆ ಅವಕಾಶವಿದೆಯೆಂದು, ಹಿರಿಯರು ಇಳಿಸುವ ಕಣದ ಹತ್ತಿರ ಶವವನ್ನು ಬಟ್ಟೆ ತೆಗೆದು ನೋಡೆಂದು, ಕರೆಯೆಂದು ಹೇಳುವುದರಿಂದ ಪ್ರಜೆಗಳು ಆ ವಿಧವಾಗಿಯೆ ಮಾಡುತ್ತಿದ್ದಾರೆ.

ಇಳಿಸುವ ಕಣದ ಹತ್ತಿರ ಬಟ್ಟೆ ತೆಗೆದು ನೋಡಿದಾಗ ಮರಣಿಸಿ ದವರು ಯಾರೋ ಒಬ್ಬರು ಬದುಕಿರುವಂತೆ ತಿಳಿದುಬಂದಿದೆ. ಅಷ್ಟೇ ಅಲ್ಲದೆ ಹೆಸರಿನಿಂದ ಕರೆದಾಗ ಸತ್ತುಹೋದವನು ನಿದ್ರೆಯಿಂದ ಎದ್ದಂತೆ ಎದ್ದು ಮಾತನಾಡುವುದು ನಡೆದಿದೆ. ಇನ್ನೂ ಕೆಲವರು ಜೋರಾಗಿ ತಟ್ಟಿದಾಗಲೂ ಸಹ ಎದ್ದವರಿದ್ದಾರೆ. ಆ ವಿಧವಾಗಿ ಪೂರ್ವದಲ್ಲಿ ಕೆಲವು ನೂರಾರು ಜನರಲ್ಲಿ ಒಬ್ಬರಾದರು ಇಳಿಸುವ ಕಣದ ಹತ್ತಿರ ಮತ್ತೆ ಬದುಕುತ್ತಿದ್ದರಂತೆ. ಆದ್ದರಿಂದ ಇಳಿಸುವ ಕಣದ ಹತ್ತಿರ ಇವತ್ತಿಗೂ ಶವದ ಮುಖವನ್ನು ಬಟ್ಟೆ ತೆಗೆದು ನೋಡುವುದು, ಕೈತಟ್ಟಿ ಕರೆಯುವುದು ನಡೆಯುತ್ತಿದೆ. ತಾತ್ಕಾಲಿಕ ಮರಣದ ವಿವರವು ತಿಳಿಯದವರು, ಸತ್ತುಹೋದವನು ಬದುಕಿರುತ್ತಾನೇನೋ ಎಂದು ತಿಳಿಯದೆ ಶವವನ್ನು ಕೈತಟ್ಟಿ ಕರೆಯುತ್ತಿಲ್ಲ. ಕೆಲವರು ಇಳಿಸುವ ಕಣದ ಹತ್ತಿರ ಚಟ್ಟವನ್ನು ಇಳಿಸಿ, ಚಟ್ಟವನ್ನು ಹೊರುವ ಮನುಷ್ಯರು ಮುಂದಿರುವವರು ಹಿಂದಕ್ಕೆ, ಹಿಂದಿನವರು ಮುಂದಕ್ಕೆ ಬದಲಾಗುತ್ತಿದ್ದಾರೆ ಹೊರತು, ಇಳಿಸುವ ಕಣದ ಅರ್ಥವಾಗಲಿ, ಆಚಾರವಾಗಲಿ, ತಿಳಿಯದಂತೆಹೋಗಿದೆ. ಆದ್ದರಿಂದ ಸತ್ತುಹೋದವನನ್ನು ಜೋರಾಗಿ ತಟ್ಟಿ ಕರೆದು ಬದುಕುತ್ತಾನೇನೋ ಎಂದು ಪ್ರಯತ್ನ ಮಾಡುವುದಾಗಲಿ ಇಲ್ಲ.

ಪೂರ್ವಕಾಲದಲ್ಲಿ ತಾತ್ಕಾಲಿಕ ಮರಣದಿಂದ ಸತ್ತುಹೋದವರು ಎಷ್ಟೋ ಜನ ಇಳಿಸುವ ಕಣದ ಹತ್ತಿರ ಇಳಿಸಿದಾಗ ಬದುಕಿರುವವರು ಇದ್ದಾರೆ. ಇಳಿಸುವ ಕಣದ ಹತ್ತಿರ ಸತ್ತುಹೋದವನು ಬದುಕುತ್ತಾನೇನೋ ಎಂದು ಆಸೆಯಿಂದ ಗಟ್ಟಿ ಪ್ರಯತ್ನದಿಂದ ತಟ್ಟುವುದು, ಕರೆಯುವುದು ಮಾಡುತ್ತಿದ್ದರು. ಆದ್ದರಿಂದ ತಾತ್ಕಾಲಿಕ ಮರಣವನ್ನು ಹೊಂದಿದವರು ಎಲ್ಲರೂ ಅಲ್ಲದಿದ್ದರು ಕೆಲವರಾದರೂ ಬದುಕುತ್ತಿದ್ದರು. ವೈದ್ಯದ ಅಗತ್ಯವಿರುವವರು ಮಾತ್ರ ಬದುಕುತ್ತಿರಲಿಲ್ಲ. ಅವರಿಗೂ ಸಹ ವೈದ್ಯ ಮಾಡಿದ್ದರೆ ಬದುಕುವವರೆ. ಜ್ಞಾಪಕ ಚೆನ್ನಾಗಿ ಇರುವವರೆಲ್ಲರೂ ವೈದ್ಯ ಅಗತ್ಯವಿಲ್ಲದಿದ್ದರು ಇಳಿಸುವ ಕಣದ ಹತ್ತಿರ ಕರೆಯುವುದು, ತಟ್ಟುವುದರಿಂದ ಎದ್ದಿದ್ದಾರೆ. ಸತ್ತುಹೋದವರು ಇಳಿಸುವ ಕಣದ ಹತ್ತಿರ ಬದುಕುವುದಕ್ಕೆ ಕಾರಣವೇನು? ಎಂದು ಕೆಲವರಿಗೆ ಪ್ರಶ್ನೆಬರಬಹುದು ಎಂದು, ಆ ದಿನಗಳಲ್ಲಿ

ತಿಳಿದ ಹಿರಿಯರು ಸತ್ತುಹೋಗಿ ಪುನಃ ಬದುಕಿದವರ ಬಗ್ಗೆ ಒಂದು ಕಥೆಯನ್ನು ಹೇಳುವುದು ನಡೆದಿದೆ. ಹಾಗೆ ದೊಡ್ಡವರು ಹೇಳಿದ ಕಥೆಯಿಂದ ಎಲ್ಲರೂ ಒಂದು ಅವಗಾಹನೆಗೆ ಬಂದು ಸತ್ತುಹೋದವರೆಲ್ಲರೂ ನಿಜವಾಗಲು ಸತ್ತುಹೋಗಿಲ್ಲವೆಂದು, ಅವರು ಸ್ವಲ್ಪ ಸಮಯ ಮಾತ್ರವೆ ಶರೀರವನ್ನು ಬಿಟ್ಟು ಹೊರಗೆ ಹೋಗಿದ್ದಾರೆಂದು, ಹಾಗೆ ಹೋದವರು ಬರಲಾರದೆ ಎಲ್ಲಿಯೋ ಸಿಲುಕಿಕೊಂಡು ಹೋಗುವುದರಿಂದ ಶರೀರ ಸತ್ತುಹೋದಂತೆ ಕಾಣಿಸುತ್ತಿದೆ ಎಂದು, ಆ ಶರೀರದ ಜೀವಿಯು ತಾನು ಸಿಲುಕಿಕೊಂಡ ಸ್ಥಳದಿಂದ ಬಂದಾಗ ಪುನಃ ತನ್ನ ಶರೀರದೊಳಗೆ ಬರುತ್ತದೆಂದುಕೊಳ್ಳುವುದು ನಡೆದಿದೆ. ಇದರಲ್ಲಿ ಸತ್ಯ ಇಲ್ಲದಿದ್ದರೂ ಅಸತ್ಯ ಕಥೆಯಿಂದಾದರೂ ಮನುಷ್ಯ ಪೂರ್ತಿ ಮರಣಿಸದಂತೆ, ಜೀವಿಯು ಬೇರೆ ಜನ್ಮಕ್ಕೆ ಹೋಗದಂತೆ, ಎಲ್ಲಿಯೋ ಸ್ವಲ್ಪ ಸಮಯವಿದ್ದು ನಂತರ ಬಂದು ಅದೇ ಶರೀರದಲ್ಲಿ ಬದುಕುತ್ತಾನೆಂಬ ಸತ್ಯವಾದರು ತಿಳಿದಿದೆ. ಅಂತಹ ಕಥೆಯಿಂದ ಸತ್ತುಹೋದವನು ಬದುಕುತ್ತಾನೇನೋ ಎಂದು ಇಳಿಸುವ ಕಣದಲ್ಲಿ ಎಲ್ಲರೂ ನೋಡುತ್ತಿದ್ದರು. ಈಗಿನ ಕಾಲದಲ್ಲಿ ಪೂರ್ವಕಾಲದಲ್ಲಿ ದೊಡ್ಡವರು ಹೇಳಿದ ಕಥೆಯಾಗಲಿ, ಇಳಿಸುವ ಕಣದಲ್ಲಿ ಕರೆಯುವ ವಿಷಯವಾಗಲಿ ತಿಳಿಯದಂತೆಹೋಗಿದೆ.

ಪೂರ್ವಕಾಲದಲ್ಲಿ ಸತ್ತುಹೋದವರಲ್ಲಿ ಎಲ್ಲರೂ ಪೂರ್ತಿಯಾಗಿ ಸತ್ತುಹೋಗಲಿಲ್ಲವೆಂದು, ಕೆಲವರು ಪುನಃ ಬದುಕುತ್ತಾರೆಂದು ಪ್ರಜೆಗಳೆಲ್ಲರನ್ನು ನಂಬಿಸಿದ ಕಥೆ ಏನೋ ಪ್ರಜೆಗಳಿಗೆ ಅರ್ಥವಾಗುವುದಕ್ಕೆ ಹಿರಿಯರು ತಿಳುವಳಿಕೆಯಿಂದ ಹೇಗೆ ಕಥೆಯನ್ನು ಕಲ್ಪಿಸಿ ಹೇಳಿದ್ದಾರೋ ತಿಳಿದುಕೊಳ್ಳೋಣ. ಮನುಷ್ಯನ ಶರೀರದಲ್ಲಿ ಜೀವಾತ್ಮ ಪ್ರತ್ಯೇಕವಾಗಿರುತ್ತದೆಂದು, ಅದು ಮನುಷ್ಯ ನಿದ್ರೆಹೋಗುವಾಗ ಹೊರಗೆಹೋಗಿ ಬರುತ್ತಿರುತ್ತದೆಂದು, ಹಾಗೆ ಹೊರಗೆ ಹೋದ ಜೀವಾತ್ಮ ಮತ್ತೆ ತನ್ನ ಶರೀರವನ್ನು ಸೇರುತ್ತದೆಂದು ತಿಳಿಸಿದ್ದಾರೆ, ಜೀವಾತ್ಮ ತನ್ನ ಶರೀರವನ್ನು ಬಿಟ್ಟು ಹೋಗುವಾಗ ಶರೀರದ ಹೊಕ್ಕಳಿನ ಮುಖಾಂತರ ಹೊರಗೆ ಬಂದು, ಹೊಕ್ಕಳಿಂದ ಒಂದು ಕಾಣಿಸದ ತಂತಿಯಂತಹದನ್ನು ತನಗೆ

ಅಂಟಿಸಿಕೊಂಡು ಎಷ್ಟು ದೂರವಾದರು ಹೋಗಬಲ್ಲನೆಂದು, ತಿರುಗಿ ಬರುವಾಗ ಆ ತಂತಿಯನ್ನು ಆಧಾರ ಮಾಡಿಕೊಂಡು ತನ್ನ ಶರೀರವನ್ನು ಗುರ್ತಿಸಿ, ಶರೀರದೊಳಗೆ ಬಂದು ಸೇರುತ್ತದೆಂದು ಹೇಳಿದ್ದಾರೆ. ಅಂತಹ ಒಂದು ಸಂಘಟನೆಯನ್ನು ಕುರಿತು ಹಿರಿಯರು ಹೀಗೆ ಹೇಳಿದ್ದಾರೆ. ಒಬ್ಬನು ತಾನು ರಾತ್ರಿ ಮಲಗುವ ಮುಂಚೆ ಬಾಯಾರಿಕೆ ಆಗುತ್ತಿದ್ದರೆ ನೀರನ್ನು ಕುಡಿದು ಮಲಗಬೇಕೆಂದುಕೊಂಡನಂತೆ. ಆದರೆ ತಾನು ಎದ್ದು ಹೋಗಿ ನೀರನ್ನು ಕುಡಿಯದ ಮುನ್ನವೆ ನಿದ್ರೆಯೊಳಗೆ ಹೋಗಿದ್ದಾನಂತೆ. ನಿದ್ರೆ ಹೋಗುವ ಮುನ್ನವೆ ನೀರನ್ನು ಕುಡಿಯಬೇಕೆಂದುಕೊಂಡಿರುವುದರಿಂದ ಮಧ್ಯರಾತ್ರಿಯಲ್ಲಿ ಜೀವಿಯು ಶರೀರವನ್ನು ಬಿಟ್ಟು ಹೊಕ್ಕಳ ಮೂಲಕ ಹೊರಗೆ ಬಂದು, ತನ್ನ ಮನೆಯಲ್ಲಿಯೆ ಒಂದು ಬಿಂದಿಗೆಯಲ್ಲಿ ತೂರಿ ನೀರನ್ನು ಕುಡಿಯುತ್ತಿತ್ತೆಂದು, ಅದೇ ಸಮಯದಲ್ಲಿ ಏನೋ ಶಬ್ದವಾಗಿದೆಂದು ಎದ್ದ ಆತನ ಹೆಂಡತಿ, ಅಡಿಗೆ ಮನೆಗೆ ಬಂದು ಬಿಂದಿಗೆಯ ಮೇಲೆ ಮುಚ್ಚುಳ ಇಲ್ಲದಿರುವುದು ನೋಡಿ, ತಕ್ಷಣ ಪಕ್ಕದಲ್ಲಿರುವ ಪ್ಲೇಟನ್ನು ಬಿಂದಿಗೆ ಮೇಲೆ ಮುಚ್ಚಿ ತಾನು ಹೋಗಿ ಮಲಗಿ ನಿದ್ರೆಹೋದಳಂತೆ. ಆಗ ಬಿಂದಿಗೆಯಲ್ಲಿ ನೀರನ್ನು ಕುಡಿಯುತ್ತಿರುವ ಜೀವಿಯು ಬಿಂದಿಗೆಯ ಮೇಲೆ ಪ್ಲೇಟು ಮುಚ್ಚಿರುವುದರಿಂದ ಹೊರಗೆ ಬರಲಾರದೆ ಬಿಂದಿಗೆಯಲ್ಲಿಯೇ ಇದ್ದುಹೋದನಂತೆ. ಹಾಗೆ ಬಿಂದಿಗೆಯಲ್ಲಿ ಸಿಲುಕಿಕೊಂಡುಹೋದ ಜೀವಿಯು ಶರೀರದಲ್ಲಿ ಇಲ್ಲದಿರುವುದರಿಂದ, ಬೆಳಗ್ಗೆ ಎದ್ದ ನಂತರ ಎಲ್ಲರೂ ಆತನ ಶರೀರವನ್ನು ನೋಡಿ ಸತ್ತುಹೋಗಿದ್ದಾನೆ ಅಂದುಕೊಂಡರು. ಮನೆಯಲ್ಲಿರುವ ವರೂ ಹೊರಗಿನವರೂ ಎಲ್ಲರೂ ಜೀವಿಯಿಲ್ಲದ ಶರೀರವನ್ನು ನೋಡಿ ಸತ್ತುಹೋಗಿದ್ದಾನೆಂದು ನಿರ್ಧಾರಿಸಿಕೊಂಡಿದ್ದಾರೆ. ಆ ದಿನ ಮನೆ ಯಜಮಾನ ಸತ್ತುಹೋಗಿರುವುದರಿಂದ ಮನೆಯಲ್ಲಿ ಅಡಿಗೆಯೂ ಸಹ ಮಾಡಲಿಲ್ಲ. ಆದ್ದರಿಂದ ಬಿಂದಿಗೆಯ ಮೇಲಿನ ಮುಚ್ಚುಳವನ್ನು ಯಾರು ತೆಗೆಯಲಿಲ್ಲವಂತೆ. ಕೊನೆಗೆ ಸಾಯಂಕಾಲ ಸಂಬಂಧಿಕರು ಶರೀರವನ್ನು ಮಣ್ಣು ಮಾಡುವುಕ್ಕೆ ಚಟ್ಟವನ್ನು ಕಟ್ಟಿ, ಚಟ್ಟದ ಮೇಲೆ ಶವವನ್ನು ಕಟ್ಟಿಕೊಂಡು ಸ್ಮಶಾನಕ್ಕೆ ಹೊತ್ತುಕೊಂಡುಹೋದರು.

ಶವವನ್ನು ಎತ್ತಿ ಕಳುಹಿಸಿದ ನಂತರ ಮನೆಯಲ್ಲಿದ್ದ ಒಬ್ಬ ಮುದುಕನು ನೀರನ್ನು ಕುಡಿಯುವುದಕ್ಕೆ ಒಳಗೆ ಹೋಗಿ ಬಿಂದಿಗೆಯ ಮೇಲೆ ಮುಚ್ಚುಳವನ್ನು ತೆಗೆದನು. ಆಗ ತಕ್ಷಣ ಹೊರಗೆ ಬಂದ ಜೀವಿಯು ತನ್ನ ಶರೀರವು ಮನೆಯಲ್ಲಿ ಇಲ್ಲದಿರುವುದು ನೋಡಿ ಏನು ನಡೆದಿದೆಯೋ ಅರ್ಥಮಾಡಿಕೊಂಡು, ತನ್ನ ಹೊಕ್ಕಳ ಆಧಾರವಾಗಿ ಬೇಗನೆ ತನ್ನ ಶರೀರದ ಹತ್ತಿರಕ್ಕೆ ಬಂದಿದ್ದಾನೆ. ಚಟ್ಟದ ಮೇಲಿರುವ ಶರೀರದೊಳಗೆ ಸೇರಿಕೊಂಡನು. ಆಗ ಶರೀರವನ್ನು ದಾರದಿಂದ ಚಟ್ಟವನ್ನು ಕದಲದಂತೆ ಕಟ್ಟಿಹಾಕಲ್ಪಟ್ಟಿದೆ. ಆದ್ದರಿಂದ ಯಾವಕಡೆ ಕದಲುವುದಕ್ಕೂ ಆಗಲಿಲ್ಲ. ಅಷ್ಟೇ ಅಲ್ಲದೆ ಬಾಯಿತುಂಬ ಅಕ್ಕಿಯನ್ನು ಹಾಕಿದ್ದಾರೆ. ಆದ್ದರಿಂದ ಗಟ್ಟಿಯಾಗಿ ಅರಚುವುದಕ್ಕೂ ಸಾಧ್ಯವಿಲ್ಲ. ಅಷ್ಟರಲ್ಲಿ ಇಳಿಸುವ ಸ್ಥಳ ಬಂದಿದೆ. ಎಲ್ಲರೂ ಶವವನ್ನು ಇಳಿಸಿ ಮುಖದ ಮೇಲೆ ಬಟ್ಟೆಯನ್ನು ತೆಗೆದು ನೋಡಿದ್ದಾರೆ. ಆಗ ಶರೀರವು ಕಣ್ಣು ತೆರೆದಿರುವುದು ನೋಡಿ, ಆತನು ಬದುಕಿದ್ದಾನೆಂದು ಗ್ರಹಿಸಿ, ಆತನ ಕಟ್ಟು ಬಿಚ್ಚಾಕಿದ್ದಾರೆ. ಇಳಿಸುವ ಕಣದಲ್ಲಿ ಕೆಲವರು ಬದುಕುತ್ತಾರೆಂದು ದೊಡ್ಡವರು ಹೇಳಿದ ಮಾತು ಸತ್ಯವಾದುದೆಂದು ಎಲ್ಲರೂ ಅಂದು ಕೊಂಡಿದ್ದಾರಂತೆ. ಇಂತಹ ಸಂಘಟನೆ ನಡೆಯುವುದು ಅಸತ್ಯವಲ್ಲ. ಏಕೆಂದರೆ ಅದು ತಾತ್ಕಾಲಿಕ ಮರಣವೆಂದು ನಮಗೆ ತಿಳಿದುಹೋಗಿದೆ. ಆದರೆ ತಾತ್ಕಾಲಿಕ ಮರಣದ ಪೂರ್ತಿವಿವರ ತಿಳಿದರೆ ಅದು ಜೀವಿಗೆ ನಿದ್ರೆಯಂತಹದೆಂದು, ಶರೀರಕ್ಕೆ ಮರಣವಂತಹದೆಂದು ತಿಳಿಯುತ್ತದೆ. ಯಾವುದು ಏನಾದರು ಇಂತಹ ಕಥೆಯಿಂದ ಇಳಿಸುವ ಕಣದಲ್ಲಿ ಶವವನ್ನು ನೋಡಬೇಕೆಂದು, ಒಂದುವೇಳೆ ಮನುಷ್ಯ ಪೂರ್ತಿ ಮರಣಿಸದಿದ್ದರೆ ಅಲ್ಲಿಯಾದರು ಬದುಕುತ್ತಾರೆಂದು ಅರ್ಥವಾಗಿದೆ. ಮೇಲಿನ ಕಥೆಯಲ್ಲಿ ಹೇಳಿದಂತೆ ನಿದ್ರೆಹೋದ ಜೀವಿಯು ತನ್ನ ಅವಶ್ಯಕತೆಯ ನಿಮಿತ್ತ ಶರೀರವನ್ನು ಬಿಟ್ಟುಹೋ ಗುವುದೆಂಬು ವುದು ಪೂರ್ತಿ ಅಸತ್ಯ.

ಇಂದಿನ ಕಾಲದಲ್ಲಿ ಪೂರ್ವಕಾಲದ ಮನುಷ್ಯರಿಗಿಂತ ಪೂರ್ತಿ ಅಜ್ಞಾನಿಗಳಾಗಿ ಬದಲಾದ ಮನುಷ್ಯರಿದ್ದಾರೆ. ಪೂರ್ವಕಾಲದಲ್ಲಿ ನಿರಕ್ಷರಸ್ತರು

ಹೆಚ್ಚಾಗಿದ್ದರೂ ಆಧ್ಯಾತ್ಮಿಕದ ಮೇಲೆ ಹೆಚ್ಚಿನ ಆಸಕ್ತಿ ಇರುತ್ತಿತ್ತು. ಆದ್ದರಿಂದ ಜನನದಲ್ಲಿಯೂ, ಮರಣದಲ್ಲಿಯೂ ಮನುಷ್ಯರು ತಪ್ಪಾಗಿ ತಿಳಿಯುತ್ತಿರಲಿಲ್ಲ. ಇಂದಿನ ಕಾಲದಲ್ಲಿ ಜನ್ಮಸಿದ್ಧಾಂತವನ್ನೂ, ಮರಣ ಸಿದ್ಧಾಂತವನ್ನೂ ತಿಳಿಯದವರು ಇರುವುದರಿಂದ, ಮನುಷ್ಯ ಹುಟ್ಟಿದಾಗ ಶಿಶು ಶರೀರದೊಳಗೆ ಜೀವಾತ್ಮ ಸೇರುವುದಕ್ಕಿಂತ ಮೊದಲೇ ಆ ಶಿಶುವು ಗರ್ಭದಲ್ಲಿಯೆ ಮರಣಿಸಿದೆ ಎಂದು ತಪ್ಪಾಗಿ ತಿಳಿದು. ಉಸಿರಾಟವಿಲ್ಲದ ಶಿಶು ಶರೀರವನ್ನು, ಜೀವಿಯು ಶರೀರದೊಳಗೆ ಪ್ರವೇಶಿಸುವುದಕ್ಕಿಂತ ಮೊದಲೇ ಮಣ್ಣು ಮಾಡುತ್ತಿದ್ದಾರೆ. **ಹೀಗೆ ದೇಶವೆಲ್ಲವೂ ಒಂದು ವರ್ಷಕ್ಕೆ ಸಾವಿರಾರು ಜನರನ್ನು ಜನ್ಮಿಸದ ಮುಂಚೆಯೆ ಸಾಯಿಸುತ್ತಿದ್ದಾರೆ.** ಹಾಗೆ ಮನುಷ್ಯ ಮರಣಿಸಿದಾಗ ಆತನು ಪೂರ್ತಿ ಮರಣಿಸದೇ, ಜೀವಿಯು ಶರೀರವನ್ನು ಬಿಟ್ಟು ಹೋಗುವುದಕ್ಕೆ ಮುನ್ನವೆ, ಉಸಿರು ಹೋಗದ ಶರೀರವನ್ನು ಸತ್ತುಹೋಗಿದೆ ಎಂದು ಭ್ರಮಿಸಿ, ಡಾಕ್ಟರ್ಸ್ ಸಹಿತವು ಮೋಸಹೋಗಿ, ಸತ್ತುಹೋದಂತೆ ನಿರ್ಧಾರಿಸುತ್ತಿದ್ದಾರೆ. ಅಂತಹವನನ್ನು ವಾಸ್ತವವಾಗಿ ಅವನು ಸತ್ತುಹೋಗದಿದ್ದರು ಮಣ್ಣು ಮಾಡುತ್ತಿದ್ದಾರೆ. ಮರಣ ವಿಷಯವು ಪೂರ್ತಿ ತಿಳಿಯದವರು ಎಷ್ಟೋಜನ, ಸತ್ತುಹೋದಂತೆ ಕಾಣಿಸಿದವರೆಲ್ಲರನ್ನು ಮರಣಿಸಿದ್ದಾನೆಂದು ನಂಬುತ್ತಿದ್ದಾರೆ. ಸತ್ತುಹೋದವರಲ್ಲಿ ಸಹ ಪೂರ್ತಿ ಸತ್ತುಹೋಗದವರಿದ್ದಾರೆಂದು ತಿಳಿಯದೆ, ಒಂದು ವರ್ಷಕ್ಕೆ ದೇಶದಲ್ಲಿ ಒಟ್ಟಾಗಿ ಕೆಲವು ಸಾವಿರಾರು ಜನರನ್ನು ಮಣ್ಣು ಮಾಡಿ ನಿಜವಾಗಲು ಸಾಯಿಸುತ್ತಿದ್ದೇವೆ. **ಶಿಶುವು ಹುಟ್ಟುತ್ತಲೆ ಅಳಲಿಲ್ಲವೆಂದು ಹೊಟ್ಟೆಯಲ್ಲಿಯೆ ಸತ್ತುಹೋಗಿದೆ ಎಂಬುವುದು ವಿಜ್ಞಾನವಲ್ಲ, ಅಜ್ಞಾನವೆ. ಹಾಗೆಯೆ ಮನುಷ್ಯನಿಗೆ ಉಸಿರಾಟವಿಲ್ಲದ ಮಾತ್ರಕ್ಕೆ ಶರೀರವನ್ನು ಬಿಟ್ಟು ಜೀವಿಯು ಹೋಗಿದ್ದಾನೆಂದುಕೊಳ್ಳುವುದು ಸಹ ಅಜ್ಞಾನವೆ ಆಗುತ್ತದೆ.** ಉಸಿರು (ಪ್ರಾಣ) ಇಲ್ಲದಷ್ಟು ಮಾತ್ರಕ್ಕೆ ಶರೀರ ಹುಟ್ಟಿದ ಸಮಯದಲ್ಲಾಗಲಿ, ಶರೀರ ಮರಣಿಸಿದ ಸಮಯದಲ್ಲಾಗಲಿ ಜೀವಿಯ ವಿಷಯ ತಿಳಿಯದೆ ತಕ್ಷಣ ನಿರ್ಧಾರಿಸಬಾರದು.



# ತಾತ್ಕಾಲಿಕ ಮರಣವನ್ನು ತಿಳಿದು ಹೊಂದಬಹುದಾ?

ತಾತ್ಕಾಲಿಕ ಮರಣವು ಕರ್ಮಾನುಸಾರ ಲಭಿಸುವುದೆಂದು ಹೇಳಿಕೊಂಡಿದ್ದೇವೆ. ಅದು ಕೆಲವರಿಗೆ ತಿಳಿದು ಲಭಿಸಬಹುದು, ಕೆಲವರಿಗೆ ತಿಳಿಯದೆ ಲಭಿಸಬಹುದು. ತಿಳಿದು ಲಭಿಸಿದರು, ತಿಳಿಯದೆ ಲಭಿಸಿದರು ಅದು ಮೊದಲೇ ಕರ್ಮದಲ್ಲಿ ನಿರ್ಣಯಿಸಲ್ಪಟ್ಟಿರುತ್ತದೆ. ಮುನ್ನೂರು ವರ್ಷಗಳ ಕೆಳಗೆ ಆಂಧ್ರಪ್ರದೇಶದಲ್ಲಿಯೇ, ಕಡಪಜಿಲ್ಲೆಯಲ್ಲಿ ಕಂದಿಮಲ್ಲಾಯಪಲ್ಲೆ ಎನ್ನುವ ಗ್ರಾಮದಲ್ಲಿ ಪೋತುಲೂರಿ ವೀರಬ್ರಹ್ಮಯ್ಯರವರು ಇರುತ್ತಿದ್ದರು. ಆತನು ದೊಡ್ಡ ಜ್ಞಾನಿ, ಅಷ್ಟೇ ಅಲ್ಲದೆ ಆತನು ಬ್ರಹ್ಮಯೋಗವನ್ನು ತಿಳಿದ ಯೋಗಿ ಎಂದು ಹೇಳಬಹುದು. ಯೋಗಗಳು ಎರಡು ವಿಧಗಳಾಗಿದ್ದು, ಅದರಲ್ಲಿ ಬ್ರಹ್ಮಯೋಗ ಒಂದು. ಬ್ರಹ್ಮಯೋಗದಲ್ಲಿ ಆತ್ಮ ಚೈತನ್ಯ ಕೆಲಸ ಮಾಡುವುದಿಲ್ಲವೆಂದು ಹೇಳಿಕೊಂಡಿದ್ದೇವೆ. ಬ್ರಹ್ಮಯೋಗದಲ್ಲಿರುವ ಮನುಷ್ಯ ಶರೀರದಲ್ಲಿ ಏನು ನಡೆಯುತ್ತಿದೆಯೋ ವೀರಬ್ರಹ್ಮಯ್ಯನವರು ತನ್ನ ತತ್ತ್ವದಲ್ಲಿ ವಿವರಿಸಿದ್ದಾರೆ. ಆ ತತ್ತ್ವದ ವಿವರವನ್ನು ನೋಡಿದರೆ ಬ್ರಹ್ಮಯೋಗಿ ಶರೀರದಲ್ಲಿ ನಡೆಯುವ ಬದಲಾವಣೆಗಳೆಲ್ಲವೂ ತಿಳಿದುಹೋಗುತ್ತವೆ. ಬ್ರಹ್ಮಯೋಗದಲ್ಲಿ ಹೊರಗೆ ಕಾಣಿಸುವ ಶ್ವಾಸ ಇಲ್ಲದಂತೆ ಹೋಗುತ್ತದೆ. ಹಾಗೆಯೇ ಶರೀರದೊಳಗೆ ಕಾಣಿಸದ ಚೈತನ್ಯವೂ ಸಹ ಒಂದುಕಡೆ ನಿಂತುಹೋಗುತ್ತದೆ. ತಾತ್ಕಾಲಿಕ ಮರಣದಲ್ಲಿ ಮೊದಲ ಶ್ವಾಸವನ್ನು ನೋಡಿ, ಅದರ ನಂತರ ಶರೀರದಲ್ಲಿನ ಚಲನೆಗಳನ್ನು ನೋಡುತ್ತೇವೆ. ಅವು ಎರಡು ಇಲ್ಲದಿದ್ದರೆ ಮರಣ ವಿಷಯವನ್ನು ಪೂರ್ತಿಯಾಗಿ ತಿಳಿದವರು, ಇದು ತಾತ್ಕಾಲಿಕ ಮರಣವೆಂದು ಗುರುತಿಸುತ್ತಾರೆ. ಮರಣ ವಿಷಯ ತಿಳಿಯದವನು ನಿಜವಾಗಲು ಸತ್ತುಹೋಗಿದ್ದಾನೆಂದು ತಪ್ಪಾಗಿ ತಿಳಿಯುತ್ತಾನೆ. ಮೂಗಿನಲ್ಲಿನ ಶ್ವಾಸ, ಶರೀರದಲ್ಲಿನ ಚೈತನ್ಯ ಇಲ್ಲದಿರುವಾಗ, ಮನುಷ್ಯ ಯಾವುದೋ ಒಂದು ಮರಣವನ್ನು ಹೊಂದಿರುತ್ತಾನೆಂದು ಅಂದುಕೊಳ್ಳುವುದು ಸಹಜವೇ. ಆದರೆ ಬ್ರಹ್ಮಯೋಗವು ಸಹ ಸುಮಾರು ಮರಣದಂತಹದ್ದೆ. ಬ್ರಹ್ಮಯೋಗದಲ್ಲಿಯೂ ಶ್ವಾಸ ನಿಂತುಹೋಗಿ, ಗುಂಡಿಗೆ (ಎದೆ) ಅಥವಾ ರಕ್ತಕೋಶ ನಿಂತು ಹೋಗಿರುತ್ತದೆ. ಇದಕ್ಕು ಮುನ್ನ ಮರಣ, ತಾತ್ಕಾಲಿಕ ಮರಣಗಳನ್ನು ಕುರಿತು ಪೂರ್ತಿಯಾಗಿ ತಿಳಿದುಕೊಂಡಿದ್ದೇವೆ.

ಈಗ ತಾತ್ಕಾಲಿಕ ಮರಣಕ್ಕೆ ಸಮಾನವಾದ ಬ್ರಹ್ಮಯೋಗವನ್ನು ಕುರಿತು ತಿಳಿದುಕೊಳ್ಳೋಣ.

ಯೋಗಗಳು ಎರಡು ವಿಧಗಳೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಅದರಲ್ಲಿ ಕರ್ಮ ಯೋಗವೆಂಬುವುದು ಶರೀರದಲ್ಲಿನ ಅಹಮ್ ಮೇಲೆ ಆಧಾರಪಟ್ಟಿರುತ್ತದೆ. ಯಾವಾಗ ಅಹಮ್ ಕೆಲಸ ಮಾಡುವುದಿಲ್ಲವೋ ಆಗ ಮನುಷ್ಯ ಕರ್ಮ ಯೋಗವನ್ನು ಹೊಂದಿದಂತೆ ಆಗುತ್ತದೆ. ಆಹಮ್ ತನಗೆ ತಾನು ಕೆಲಸ ಮಾಡದೆ ಎಂದಿಗೂ ನಿಂತುಹೋಗುವುದಿಲ್ಲ. ಆದ್ದರಿಂದ ಅಹಮ್ ಕೆಲಸ ಮಾಡದಂತೆ ಹೋಗಬೇಕೆಂದರೆ ಮನುಷ್ಯ ಪ್ರಯತ್ನ ಮಾಡಿ ಅಹಮ್‌ನನ್ನು ನಿಲ್ಲಿಸಬೇಕು. ಹಾಗೆ ಮನುಷ್ಯ ಮಾಡುವ ಪ್ರಯತ್ನವನ್ನು ಯೋಗಸಾಧನೆ ಅನ್ನುತ್ತೇವೆ. ತನ್ನ ಪ್ರಯತ್ನ ನೆರವೇರಿ ಅಹಮ್ ಕೆಲಸ ಮಾಡುವುದು ನಿಂತುಹೋದರೆ, ಆಗ ಅದು ಕರ್ಮಯೋಗವಾಗುತ್ತದೆ. ಅದನ್ನು ಸಾಧಿಸಿದವನು ಕರ್ಮಯೋಗಿ ಆಗುತ್ತಾನೆ. ಹಾಗೆಯೆ ಬ್ರಹ್ಮಯೋಗ ಎಂಬುವುದು ಶರೀರದಲ್ಲಿನ ಮನಸ್ಸಿನ ಮೇಲೆ ಆಧಾರಪಟ್ಟಿರುತ್ತದೆ. ಯಾವಾಗ ಮನಸ್ಸು ಕೆಲಸ ಮಾಡುವುದಿಲ್ಲವೋ ಆಗ ಮನುಷ್ಯ ಬ್ರಹ್ಮಯೋಗವನ್ನು ಹೊಂದಿದಂತೆ ಆಗುತ್ತದೆ. ಶರೀರದಲ್ಲಿನ ಮನಸ್ಸು ಸಹ ಯಾರಲ್ಲಿಯೂ ತನಗೆತಾನಾಗಿ ಎಂದಿಗೂ ನಿಂತುಹೋಗುವುದಿಲ್ಲ. ಇಲ್ಲಿ ಸ್ವಲ್ಪ ಚೆನ್ನಾಗಿ ಯೋಚಿಸಿ ತಿಳಿದುಕೊಳ್ಳ ಬೇಕಾಗಿರುವುದು ಏನೆಂದರೆ! ಅಹಮ್ ಆಗಲಿ ಮನಸ್ಸಾಗಲಿ ಎರಡು ಬಲವಾದವೆ! ಈ ಎರಡು ತಮಗೆ ತಾವಾಗಿ ಎಂದಿಗೂ ನಿಂತುಹೋಗುವುದಿಲ್ಲ. ಅಹಮ್‌ನನ್ನು, ಮನಸ್ಸನ್ನೂ ವಿವರವಾಗಿ ತಿಳಿದುಕೊಳ್ಳುವುದಕ್ಕೆ ಮುನ್ನ ಒಂದು ಉದಾಹರಣೆ ಯನ್ನು ತೆಗೆದುಕೊಂಡು ನೋಡೋಣ.

ಒಂದು ಮನೆಯ ಯಜಮಾನ, ಎರಡು ನಾಯಿ ಮರಿಗಳನ್ನು ಚಿಕ್ಕಂದಿನಿಂದ ಹಾಲು ಒಯ್ದು ಬೆಳೆಸಿದ್ದಾನೆ. ಚಿಕ್ಕಂದಿನಿಂದ ತಮ್ಮನ್ನು ಬೆಳೆಸಿದ ಯಜಮಾನನ ಮೇಲೆ ಆ ಎರಡು ನಾಯಿಗಳು ಎಷ್ಟೋ ವಿಶ್ವಾಸದಿಂದ ಇವೆ. ಆ ಮನೆ ಯಜಮಾನ ಎರಡು ನಾಯಿಗಳಿಗೂ ಲಂಬು, ಜಂಬು

ಎಂದು ಎರಡು ಹೆಸರುಗಳನ್ನು ಇಟ್ಟಿದ್ದಾನೆ. ಲಂಬು, ಜಂಬು ಎನ್ನುವ ಎರಡು ನಾಯಿಗಳು ಒಂದೇ ಮನೆಯಲ್ಲಿ ಬೆಳೆದರೂ ಅವು ಎರಡು ಬೇರೆ ಬೇರೆ ಸ್ವಭಾವಗಳು ಹೊಂದಿದ್ದವು. ಅವು ಹೇಗಿದ್ದರು ತಮ್ಮ ಯಜಮಾನನ ಮೇಲೆ ಎಷ್ಟೋ ಗೌರವದಿಂದ, ವಿಶ್ವಾಸದಿಂದ ಇರುತ್ತಿದ್ದವು. ಆದ್ದರಿಂದ ಮನೆಯ ಯಜಮಾನ ಏನು ಹೇಳಿದರು ಆತನ ಮಾತು ಕೇಳುತ್ತಿದ್ದವು. ಯಜಮಾನ ಕುಳಿತುಕೋ ಎಂದರೆ ಕುಳಿತುಕೊಳ್ಳುತ್ತಿದ್ದವು, ಎದ್ದೇಳು ಎಂದರೆ ಏಳುತ್ತಿದ್ದವು. ಒಂದು ದಿನ ಯಾರೋ ಗುರ್ತು ತಿಳಿಯದ ವ್ಯಕ್ತಿ ಮನೆಯೊಳಗೆ ಬರಬೇಕೆಂದು ಪ್ರಯತ್ನ ಮಾಡಿದಾಗ, ಅವನನ್ನು ಕಳ್ಳನಾಗಿ ಗುರ್ತಿಸಿದ ಆ ನಾಯಿಗಳು ಅವನ ಮೇಲೆ ದಾಳಿ ಮಾಡಿ, ಅವನನ್ನು ಓಡಿಸಿದವು. ತಾವಿರುವ ಮನೆಗೆ ಎರಡು ದ್ವಾರಗಳಿವೆ. ಆದ್ದರಿಂದ ಒಂದೊಂದು ದ್ವಾರದ ಹತ್ತಿರ ಒಂದೊಂದು ನಾಯಿ ಇರುತ್ತಿತ್ತು. ಮುಂದಿನ ದ್ವಾರದ ಹತ್ತಿರ ಇರುವ ಲಂಬು ಎನ್ನುವ ನಾಯಿ ಆ ಕಡೆ ಯಾರನ್ನು ಬರಲು ಬಿಡುತ್ತಿರಲಿಲ್ಲ. ಹಾಗೆಯೆ ಹಿಂಭಾಗದ ಹತ್ತಿರವಿರುವ ಜಂಬು ಸಹ ತನ್ನ ದ್ವಾರದ ಹತ್ತಿರಕ್ಕೆ ಯಾರನ್ನು ಬರಲು ಬಿಡುತ್ತಿರಲಿಲ್ಲ. ಆ ಮನೆ ಯಜಮಾನನಿಗೆ ತನ್ನ ನಾಯಿಗಳು ಎಷ್ಟೋ ಚೆನ್ನಾಗಿ ಕೆಲಸ ಮಾಡುತ್ತಿವೆಂದು ತಿಳಿದಿದೆ. ತನ್ನ ನಾಯಿಗಳನ್ನು ರಾತ್ರಿ ಸಮಯ ಮಾತ್ರ ಕಾವಲಿಗೆ ಇಟ್ಟು, ಹಗಲಿನ ಸಮಯ ನಿದ್ರೆಹೋಗುವಂತೆ ಅವುಗಳಿಗೋಸ್ಕರ ಪ್ರತ್ಯೇಕವಾಗಿ ಮಾಡಿಸಿದ ಬೋನಿನೊಳಗೆ ಕಳುಹಿಸುತ್ತಿದ್ದನು. ತಮ್ಮ ಯಜಮಾನನ ಮಾತನ್ನು ಕೇಳುವ ನಾಯಿಗಳು ಎರಡೂ, ಯಜಮಾನ ಹೇಳಿದಂತೆ ರಾತ್ರಿ ಸಮಯ ಮನೆಗೆ ಎರಡು ಕಡೆಯಲ್ಲಿಯೂ ಕಾವಲಾಗಿದ್ದು ಹಗಲು ಬೋನಿನೊಳಗೆ ಹೋಗಿ ನಿದ್ರೆ ಮಾಡುತ್ತಿದ್ದವು.

ತಮ್ಮ ಯಜಮಾನ ತಮ್ಮ ಹತ್ತಿರಕ್ಕೆ ಯಾವಾಗ ಬಂದರು ಅವು ಗುರ್ತಿಸುತ್ತಿದ್ದವು. ಆಗಿರುವಾಗ, ಒಂದು ದಿನ ಒಬ್ಬ ಕಳ್ಳ ಆ ಮನೆ ಯಜಮಾನ ನಂತೆ ವೇಷವನ್ನು ಧರಿಸಿ, ಆ ಮನೆಯೊಳಗೆ ಹೋಗಿ ಕಳ್ಳತನ ಮಾಡಬೇಕೆಂದು ಕೊಂಡಿದ್ದಾನೆ. ಮನೆಯಲ್ಲಿನ ಒಡವೆಯೆಲ್ಲವನ್ನು ತನ್ನ ಸ್ವಂತ ಮಾಡಿಕೊಳ್ಳಬೇಕೆಂದು

ಕೊಂಡನು. ಹಾಗೆ ಅಂದುಕೊಂಡು ಒಂದು ಪಥಕದ ಪ್ರಕಾರ, ಕಳ್ಳ ಆ ಮನೆಯ ಮುಂದಿನ ದ್ವಾರದ ಹತ್ತಿರಕ್ಕೆ ಹೋಗುತ್ತಲೇ ಲಂಬು ಎನ್ನುವ ನಾಯಿ, ಕಳ್ಳನನ್ನು ಗುರ್ತಿಸಿ ಬೊಗಳುವುದು ಶುರು ಮಾಡಿದೆ. ಆಗ ನಾನು ಮನೆ ಯಜಮಾನನೆ ಎಂದು ನಾಯಿಯನ್ನು ನಂಬಿಸುವುದಕ್ಕೆ ಪ್ರಯತ್ನಿಸಿದ್ದಾನೆ. ಆದರೂ ಆ ನಾಯಿ ನೀನು ನಮ್ಮ ಯಜಮಾನ ಅಲ್ಲ ಎನ್ನುವಂತೆ ಆತನ ಮೇಲೆ ದಾಳಿ ಮಾಡುವುದಕ್ಕೆ ಬಂದಿದೆ. ಆಗ ಆ ಕಳ್ಳ ಹಿಂದಿನ ದ್ವಾರದ ಹತ್ತಿರಕ್ಕೆ ಹೋಗಿದ್ದಾನೆ. ಅಲ್ಲಿ ಜಂಬು ಎನ್ನುವ ನಾಯಿ ಕಾವಲಿರುವುದರಿಂದ, ಕಳ್ಳ ಅಲ್ಲಿಯೂ ಸಹ ಯಜಮಾನನಂತೆ ನಟಿಸಿ ಒಳಗೆ ಹೋಗಬೇಕೆಂದುಕೊಂಡಿದ್ದಾನೆ. ಆದರೂ ಆ ನಾಯಿ ಸಹ ಆತನನ್ನು ಯಜಮಾನ ಅಲ್ಲವೆಂದು ಕಳ್ಳ ಎಂದು ಗುರ್ತಿಸಿದೆ. ತಕ್ಷಣ ಬೊಗಳಿ ಕಳ್ಳನನ್ನು ಓಡಿಸಿದೆ.

ಇದನ್ನನುಸರಿಸಿ ನೋಡಿದರೆ ಆ ನಾಯಿಗಳು ಎರಡು ಯಜಮಾನನ ಮಾತನ್ನು ಹೊರತು ಯಾರ ಮಾತು ಕೇಳುವುದಿಲ್ಲವೆಂದು ತಿಳಿದುಹೋಗಿದೆ. ಅದೇ ವಿಧವಾಗಿ ಶರೀರವೆಂಬ ಮನೆಯಲ್ಲಿ, ಆತ್ಮವೆಂಬ ಯಜಮಾನನ ಮಾತುಕೇಳುವ ಲಂಬು, ಜಂಬು ಎನ್ನುವ ಎರಡು ನಾಯಿಗಳಂತೆ ಮನಸ್ಸು, ಅಹಮ್ ಎನ್ನುವವು ಇವೆ. ನಾಯಿಗಳು ಯಜಮಾನನ ಮಾತನ್ನು ಮಾತ್ರ ಕೇಳುವಂತೆ, ಮನಸ್ಸು, ಅಹಮ್ ಎನ್ನುವವು ಆತ್ಮದ ಮಾತು ಮಾತ್ರವೇ ಕೇಳುತ್ತವೆ. ಕಳ್ಳ ಯಜಮಾನನಂತೆ ನಂಬಿಸಿದರು, ನಾಯಿಗಳು ಕಳ್ಳನ ಮಾತು ಕೇಳಲಿಲ್ಲ. ಹಾಗೆಯೆ ಕಳ್ಳನಂತಿರುವ ಜೀವಿಯು ಮನಸ್ಸು, ಅಹಮ್‌ನನ್ನು ಯಜಮಾನನಾದ ಆತ್ಮನಂತೆ ನಂಬಿಸಬೇಕೆಂದು ನೋಡಿದರು ಆಗಲಿಲ್ಲ. ಹಾಗೆಯೆ ಮನಸ್ಸು, ಅಹಮ್‌ಗಳನ್ನು ಜೀವಿಯು ಒಳಪಡಿಸಿಕೊಳ್ಳಬೇಕೆಂದು ನೋಡಿದರೂ, ಆತ್ಮ ಅಧೀನದಲ್ಲಿರುವ ಮನಸ್ಸು, ಅಹಮ್ ಜೀವಿಯ ಮಾತು ಕೇಳಲಿಲ್ಲವೆಂದು ತಿಳಿಯುತ್ತದೆ. ಮನೆ ಯಜಮಾನ ನಾಯಿಗಳಿಗೆ ರಾತ್ರಿ ಕೆಲಸವನ್ನು ಇಟ್ಟು, ಹಗಲು ನಿದ್ರೆಹೋಗುವಂತೆ ಮಾಡಿದ್ದಾನೆ. ಅವು ಹಾಗೆಯೆ ಮಾಡಿದಂತೆ, ಶರೀರವೆಂಬ ಮನೆಯಲ್ಲಿ ಅಹಮ್, ಮನಸ್ಸು ಎನ್ನುವವುಗಳಿಗೆ ಆತ್ಮ ಹಗಲು ಕೆಲಸವಿಟ್ಟು, ರಾತ್ರಿ ನಿದ್ರೆಹೋಗುವಂತೆ ಮಾಡಿದೆ. ಅದೇ ವಿಧವಾಗಿ ನಮ್ಮ

ಶರೀರದಲ್ಲಿ ಮನಸ್ಸು, ಅಹಮ್ ಎರಡು ಆತ್ಮ ಹೇಳಿದಂತೆ ಕೇಳುತ್ತವೆ. ಎಚ್ಚರದಲ್ಲಿ ಅಹಮ್, ಮನಸ್ಸು ಕೆಲಸ ಮಾಡುತ್ತಿರುವಾಗ, ನಿದ್ರೆಯಲ್ಲಿ ಅಹಮ್, ಮನಸ್ಸು ಎರಡು ವಿಶ್ರಾಂತಿ ತೆಗೆದುಕೊಳ್ಳುತ್ತವೆ. **ಹಗಲು ಜ್ಞಾಪಕದಲ್ಲಿ ಅಹಮ್ ಕೆಲಸ ಮಾಡದೆಹೋದರೆ ಕರ್ಮಯೋಗವಾಗುತ್ತದೆ. ಅದೇ ವಿಧವಾಗಿ ಜ್ಞಾಪಕವಾಗಿದ್ದು ಮನಸ್ಸು ಕೆಲಸ ಮಾಡದೆಹೋದರೆ ಬ್ರಹ್ಮಯೋಗವಾಗುತ್ತದೆ**. ಯಜಮಾನ ಲಂಬು, ಜಂಬು ಎನ್ನುವ ಎರಡು ನಾಯಿಗಳನ್ನು ರಾತ್ರಿ ಕಾವಲಿರುವಂತೆ ನಿಯಮಿಸಿದ್ದಾನೆ ಅಲ್ಲವೆ! ಅದೇ ವಿಧವಾಗಿ ಆತ್ಮ ಮನಸ್ಸಿಗೆ, ಆಹಮ್‌ಗೆ ಹಗಲು ಹೊತ್ತು ಕೆಲಸ ಮಾಡುವಂತೆ ನಿಯಮಿಸಿದೆ ಅಲ್ಲವೆ! ಒಂದು ವೇಳೆ ಯಜಮಾನ ನಿಯಮಿಸಿದಂತೆ ಕಾವಲಿರದಂತೆ ಕಳ್ಳನ ಮಾತು ಕೇಳಿ, ತಮ್ಮ ಕೆಲಸವನ್ನು ಸಕ್ರಮವಾಗಿ ಮಾಡದೆಹೋದರೆ, ಆಗ ಕಳ್ಳತನ ನಡೆದುಹೋಗುತ್ತಿತ್ತು. ನಾಯಿಗಳು ಕಳ್ಳನ ಮಾತು ಕೇಳಿದಂತಾಗುತ್ತಿತ್ತು. ಅದೇ ವಿಧವಾಗಿ ಆತ್ಮ ಮಾತನ್ನು ಕೇಳಿ, ಆತ್ಮ ಹೇಳಿದಂತೆ, ಮಾಡುವ ಮನಸ್ಸು ಎಚ್ಚರಿಕೆಯಲ್ಲಿಯೇ, ಆತ್ಮ ಹೇಳಿದಂತೆ ತನ್ನ ಕೆಲಸವನ್ನು ತಾನು ಮಾಡದೆ ನಿಂತುಹೋದರೆ ಜೀವಾತ್ಮ ಮಾತು ಕೇಳಿದಂತಾ ಗುತ್ತದೆ. ನಾಯಿ ಕೆಲಸ ಮಾಡದಿರುವಾಗ ಕಳ್ಳ ಕಳ್ಳತನವನ್ನು ಮಾಡಿದಂತೆ, ಮನಸ್ಸು ಕೆಲಸ ಮಾಡದಿರುವಾಗ ಜೀವಾತ್ಮ, ಆತ್ಮ ಸ್ವತ್ತನ್ನು (ಆತ್ಮ ಧನವನ್ನು) ದೋಚುಕೊಳ್ಳುತ್ತದೆ. ಆಗ ಅದು ಯೋಗವಾಗುತ್ತದೆ. ಎಚ್ಚರಿಕೆಯಲ್ಲಿ ಮನಸ್ಸು ಕೆಲಸ ಮಾಡದಿರುವಾಗ ಬ್ರಹ್ಮಯೋಗವಾಗುತ್ತದೆ. ಹಾಗೆಯೇ ಜ್ಞಾಪಕದಲ್ಲಿ ಅಹಮ್ ಕೆಲಸ ಮಾಡದೆಹೋದರೆ ಕರ್ಮಯೋಗವಾಗುತ್ತದೆ.

ಆತ್ಮ ಅಧಿಪತಿಯಾಗಿರುವ ಶರೀರದಲ್ಲಿ ಕೆಲಸ ಮಾಡುತ್ತಿರುವ ಮನೋ ಅಹಮ್‌ಗಳು ಎರಡು ನಿದ್ರೆಯಲ್ಲಿ ಕೆಲಸ ಮಾಡದೆಹೋಗುವುದು, ಎಚ್ಚರದಲ್ಲಿರು ವಾಗ ಪೂರ್ತಿಯಾಗಿ ಕೆಲಸ ಮಾಡುವುದು ಅವುಗಳ ಪ್ರಕೃತಿ ಧರ್ಮ. ಆದರೆ ಎಚ್ಚರದಲ್ಲಿ ಕೆಲಸ ಮಾಡದಂತೆ ಹೋಗುವುದು ಮನಸ್ಸಿಗೆ, ಅಹಮ್‌ಗೆ ಪೂರ್ತಿಯಾಗಿ ಅಧರ್ಮವಾಗುತ್ತದೆ. ಮನಸ್ಸು, ಅಹಮ್ ಪ್ರಕೃತಿ ಜನಿತವಾದವು ಆದ್ದರಿಂದ ಮನಸ್ಸಾಗಲಿ, ಅಹಮ್ ಆಗಲಿ ತಮ್ಮ ಕೆಲಸವನ್ನು ತಾವು ಮಾಡ

ದಂತೆಹೋಗುವುದು ಪ್ರಕೃತಿಗೆ ಅಧರ್ಮವಾಗುತ್ತದೆ. ಪರಮಾತ್ಮಗೆ ಧರ್ಮ ವಾಗುತ್ತದೆ. ಆತ್ಮ ಅಧಿಪತಿಯಾಗಿದ್ದು, ಪ್ರಕೃತಿ ಧರ್ಮಗಳಿಂದ ಕೂಡಿಕೊಂಡ ಪ್ರಕೃತಿಯಿಂದ ತಯಾರಾದ ಶರೀರಕ್ಕೆ ಶಕ್ತಿ ಕೊಡುತ್ತದೆ. ಇದರಿಂದ ಮನಸ್ಸು ಕೆಲಸ ಮಾಡುವುದು ಮಾಯೆಗೆ ಧರ್ಮವಾಗುತ್ತದೆ. ಹಾಗೆ ಅಹಮ್ ಕೆಲಸ ಮಾಡುವುದು ಸಹ ಮಾಯೆಗೆ ಧರ್ಮವಾಗುತ್ತದೆ, ದೈವಕ್ಕೆ ಅಧರ್ಮವಾಗುತ್ತದೆ. ಜ್ಞಾಪಕದಲ್ಲಿರುವಾಗ ಮನಸ್ಸು ಕೆಲಸ ಮಾಡದೆ ಹೋದರೆ ಅದು ದೈವಕ್ಕೆ ಧರ್ಮವಾಗುತ್ತದೆ, ಮಾಯೆಗೆ ಅಧರ್ಮವಾಗುತ್ತದೆ. ಜ್ಞಾಪಕದಲ್ಲಿ ಮನಸ್ಸು ಕೆಲಸ ಮಾಡದೆಹೋದರೆ ದೈವ ಧರ್ಮದ ಪ್ರಕಾರ ಅದು ಬ್ರಹ್ಮಯೋಗವಾಗುತ್ತದೆ. ಹಾಗೆ ಜ್ಞಾಪಕದಲ್ಲಿ ಅಹಮ್ ಕೆಲಸ ಮಾಡದೆಹೋದರೆ ದೈವಧರ್ಮದ ಪ್ರಕಾರ ಕರ್ಮಯೋಗವಾಗುತ್ತದೆ. ಪ್ರಕೃತಿ ಜನಿತ ಶರೀರದಲ್ಲಿನ ಮನಸ್ಸು, ಅಹಮ್‌ಗಳನ್ನು ಅನುಸರಿಸಿ ಬ್ರಹ್ಮ, ಕರ್ಮ ಯೋಗಗಳು ಇವೆಯೆಂದು ತಿಳಿಯುತ್ತದೆ.

ಬ್ರಹ್ಮಯೋಗವನ್ನು ಕುರಿತು ಚೆನ್ನಾಗಿ ಅರ್ಥವಾಗಬೇಕೆಂದರೆ ಮೇಲಿನ ಉದಾಹರಣೆಯನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳಬೇಕು. ನಾಯಿಯನ್ನು ಒಳ್ಳೆಯತನದಿಂದ ಒಳ್ಳೆಯದಾಗಿ ವಾಡಿಕೊಳ್ಳಬಹುದು, ಇಲ್ಲದಿದ್ದರೆ ಬಲವಂತವಾಗಿ ಒಳಪಡಿಸಿಕೊಳ್ಳಬಹುದು. ನಾಯಿಗೆ ತಿನ್ನುವ ರುಚಿಕರವಾದ ಆಹಾರವನ್ನು ಕೊಡುವುದರಿಂದ ಅದು ಒಳ್ಳೆಯದಾಗಿ ಬೊಗಳದಂತಿರುತ್ತದೆ. ಬಲವಂತವಾದ ಎರಡನೆ ವಿಧಾನದಲ್ಲಿ ಮರೆಯಲ್ಲಿ ನಾಯಿಯನ್ನು ಹಿಡಿದು ಕೊಂಡು ಅದರ ಮೂತಿಯನ್ನು ಕಟ್ಟಿಹಾಕುವುದು. ಹಾಗೆ ಮಾಡುವುದರಿಂದ ಅದು ಬಾಯಿ ತೆರೆಯುವುದಿಲ್ಲ, ಬೊಗಳುವುದಿಲ್ಲ. ಮೊದಲ ಪದ್ಧತಿಯಲ್ಲಿ ಮನಸ್ಸನ್ನು ಪ್ರಯತ್ನ ಮಾಡಿ ಕೆಲಸ ಮಾಡದಂತೆ ನಿಂತುಹೋಗುವಂತೆ ಮಾಡುವು ದನ್ನು ಯೋಗಸಾಧನೆ ಅನ್ನುತ್ತೇವೆ. ಹಾಗೆ ಚಲಿಸುವ ಮನಸ್ಸು ಚಲಿಸದಂತೆ ಹೋಗಬೇಕೆಂದರೆ, ಎಷ್ಟೋ ಕಾಲ ಅದನ್ನು ಕೆಲಸ ಮಾಡದಂತೆ ಅಭ್ಯಾಸ ಮಾಡಿಕೊಳ್ಳಬೇಕು. ಇದಕ್ಕೆ ಬಹಳ ಕಾಲ ಹಿಡಿಯುತ್ತದೆ. ಇನ್ನು ಎರಡನೆ ವಿಧಾನದಲ್ಲಿ ಮನಸ್ಸು ಬಲವಂತವಾಗಿ ನಿಲ್ಲಿಸುವುದು ಒಂದು ವಿಧವಾಗಿ ಇದು

ಸ್ವಲ್ಪ ಕಷ್ಟವಾದುದು, ಅಪಾಯಕರವಾದುದು, ಆದರೂ ಇದನ್ನು ಬೇಗನೆ ಸಾಧಿಸಬಹುದು. ಅಪುರೂಪವಾಗಿ ಕೆಲವರು ಈ ಎರಡನೆ ಪದ್ಧತಿಯನ್ನೆ ಆಚರಿಸಿದ್ದಾರೆ. ಅಂತಹವರು ಹೇಗೆ ಆ ಪದ್ಧತಿಯನ್ನು ಅವಲಂಭಿಸುತ್ತಿದ್ದಾರೊ ಅವರಿಗೆ ತಿಳಿದ ಸೂತ್ರವೇನೋ ನೋಡೋಣ. ಮನಸ್ಸು ನಿಂತುಹೋಗುವುದು ಬ್ರಹ್ಮಯೋಗವಾಗುತ್ತದೆ. ಮನಸ್ಸು ನಿಂತುಹೋದಾಗ ಅದಕ್ಕೆ ಅನುಸಂಧಾನ ವಾದ ಶ್ವಾಸವೂ ಸಹ ನಿಂತುಹೋಗುತ್ತದೆ. ಶ್ವಾಸ ನಿಂತುಹೋಗುವುದರಿಂದ ಆ ಶರೀರವು, ಹೊರಗೆ ಮರಣಿಸದ ಶರೀರದಂತೆ ಕಾಣಿಸುತ್ತದೆ. ಬ್ರಹ್ಮಯೋಗ ದಲ್ಲಿರುವವರಿಗೆ ಹೊರಗಿನ ಪ್ರಪಂಚದೊಂದಿಗೆ ಸಂಬಂಧ ಇಲ್ಲದಂತಿರುತ್ತದೆ. ಅಂತಹವರು ಆಸನದಲ್ಲಿ ಕುಳಿತುಕೊಂಡಿರುವುದರಿಂದ, ಆತನು ಯೋಗವು ಮಾಡುವ ಯೋಗಿ ಎಂದು ಎಲ್ಲರಿಗೂ ತಿಳಿದಿರುವುದರಿಂದ, ಆತನಿಗೆ ಶ್ವಾಸ ಆಡದಿದ್ದರು, ಆತನನ್ನು ಯೋಗದಲ್ಲಿ ಇದ್ದಾನೆಂದುಕೊಳ್ಳುತ್ತಾರೆ. ಆದರೆ ಮರಣಿ ಸಿದ್ದಾನೆಂದು ಯಾರು ಅಂದುಕೊಳ್ಳುವುದಿಲ್ಲ.

ಬ್ರಹ್ಮಯೋಗದಲ್ಲಿ ಒಳಗೆ ಮನಸ್ಸು ನಿಂತುಹೋಗುವುದರಿಂದ ಹೊರಗೆ ಶ್ವಾಸ ನಿಂತುಹೋಗುತ್ತಿದೆ. ಅದೇ ತಾತ್ಕಾಲಿಕ ಮರಣದಲ್ಲಿ ಮುಂಚೆ ಹೊರಗಿನ ಶ್ವಾಸ ನಿಂತುಹೋಗುವುದರಿಂದ ನಂತರ ಒಳಗಿನ ಮನಸ್ಸು ನಿಂತುಹೋಗುತ್ತಿದೆ. ಈಕಡೆ ಬ್ರಹ್ಮಯೋಗದಲ್ಲಾಗಲಿ, ಆಕಡೆ ತಾತ್ಕಾಲಿಕ ಮರಣದಲ್ಲಾಗಲಿ ಜೀವಿಯು ಶರೀರವನ್ನು ಬಿಟ್ಟುಹೋಗುವುದಿಲ್ಲ. ಆದ್ದರಿಂದ ಆತನು ಸಜೀವವಾಗಿ, ಆತ್ಮ ಸಮೇತವಾಗಿ ಶರೀರದಲ್ಲಿಯೆ ಇರುತ್ತಾನೆ. **ಮನಸ್ಸು ಮೊದಲು ನಿಂತರೆ ನಂತರ ಶ್ವಾಸ ನಿಲ್ಲುತ್ತದೆಂದು, ಒಂದುವೇಳೆ ಶ್ವಾಸ ಮೊದಲೆ ನಿಂತರೆ ನಂತರ ಮನಸ್ಸು ನಿಲ್ಲುತ್ತದೆಂದು ಕೆಲವರು ಗ್ರಹಿಸಿದ್ದಾರೆ**. ಆದ್ದರಿಂದ ಕೆಲವರು ಸಾಧನೆ ಮಾಡಿ, ಶ್ವಾಸವನ್ನು ಶರೀರದೊಳಗೆ ಕಳುಹಿಸಿ ನಿಲ್ಲಿಸುತ್ತಿದ್ದಾರೆ. ಶರೀರದ ಹೊರಗೆ ಶ್ವಾಸ ಹೊರಟುಹೋದರೆ ಅದು ಶಾಶ್ವತ ಮರಣವಾಗುತ್ತದೆ. ಶ್ವಾಸ ಶರೀರದೊಳಗೆ ಹೋಗಿ ನಿಂತುಹೋದರೆ ಅದು ಮರಣದಂತಹದಾಗುತ್ತದೆ, ಆದರೆ ಮರಣವಲ್ಲ. ಹಾಗೆ ಮರಣವಂತಹದನ್ನು ತಾತ್ಕಾಲಿಕ ಮರಣ ಎನ್ನುತ್ತಿದ್ದೇವೆ. ಶ್ರೀ

ಪೋತುಲೂರಿ ವೀರಬ್ರಹ್ಮಯ್ಯನವರು ಶ್ವಾಸವನ್ನು ಬಂಧಿಸಿ, ಮನಸ್ಸನ್ನು ಬಂಧಿಸಿದ್ದಾನೆ. ಶ್ವಾಸವನ್ನು ಶರೀರದೊಳಗೆ ನಿಲ್ಲಿಸುವುದನ್ನು ಕುಂಭಕ ಎನ್ನುತ್ತಾರೆ. ಶ್ವಾಸ ಕುಂಭಿಸುವುದು ಎನ್ನುತ್ತಾರೆ. ಹಾಗೆ ಶ್ವಾಸವನ್ನು ಹೊರಗೆ ಬಾರದಂತೆ ಬಂಧಿಸುವುದನ್ನು ಪ್ರಾಣಯಾಮ ಎಂದು ಸಹ ಅನ್ನುತ್ತಿದ್ದಾರೆ. ಯಾವುದು ಏನಾದರು ಜ್ಞಾಪಕದಲ್ಲಿರುವ ಮನಸ್ಸನ್ನು ಕೆಲಸ ಮಾಡದಂತೆ ಬಂಧಿಸಲ್ಪಟ್ಟಾಗ, ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ಅದು ಬ್ರಹ್ಮಯೋಗವಾಗುತ್ತದೆ. ಪೂರ್ವಕಾಲದಲ್ಲಿ ಕೆಲವರು ಬ್ರಹ್ಮಯೋಗವನ್ನು ಮನಸ್ಸಿನ ಮೂಲಕ ಸಾಧಿಸಿದವರಿದ್ದಾರೆ. ಮತ್ತೆ ಕೆಲವರು ಶ್ವಾಸದ ಮೂಲಕ ಸಾಧಿಸಿದವರಿದ್ದಾರೆ. ಇದೆಲ್ಲವೂ ಜ್ಞಾನ ತಿಳಿದು ಮಾಡಿದಾಗ, ಮಾಡಿದವನು ಯೋಗಿ ಆಗುತ್ತಾನೆ, ಆತನಿಗೆ ಯೋಗಶಕ್ತಿ ಬರುತ್ತದೆ. ದೈವಜ್ಞಾನ ಇಲ್ಲದೆ ಶ್ವಾಸವನ್ನು ಕುಂಭಿಸುವ ಸಾಧನೆ ಮಾಡಿ ಶ್ವಾಸವನ್ನು ಒಂದು ತಿಂಗಳು, ಒಂದು ವರ್ಷ ನಿಲ್ಲಿಸುವವರು ಸಹ ಇದ್ದಾರೆ. ಅಂತಹವರು ಶ್ವಾಸ ನಿಂತಷ್ಟು ಕಾಲ ನಿದ್ರೆಯೊಳಗೆ ಹೋಗಿ, ತಾತ್ಕಾಲಿಕ ಮರಣವನ್ನು ಹೊಂದುತ್ತಾರೆ, ಆದರೆ ಜ್ಞಾಪಕದಿಂದಿರುವ ಯೋಗವನ್ನು ಹೊಂದಲಾರರು.

ವೀರಬ್ರಹ್ಮಯ್ಯನವರು ದೈವಜ್ಞಾನವನ್ನು ತಿಳಿದ ಬ್ರಹ್ಮಯೋಗಿ, ಆತನು ಒಳಗಿನ ಮನಸ್ಸನ್ನು ಜಯಿಸದೆ, ಹೊರಗಿನ ಶ್ವಾಸವನ್ನು ಒಳಗೆ ಬಂಧಿಸಿ, ಮನಸ್ಸನ್ನು ಸ್ವಾಧೀನದೊಳಗೆ ತಂದುಕೊಂಡು, ಕೆಲವು ವರ್ಷಗಳು ಸಮಾಧಿ ಯಲ್ಲಿಯೇ ಜ್ಞಾಪಕದಿಂದಿದ್ದ ಬ್ರಹ್ಮಯೋಗಿ. ಬ್ರಹ್ಮಯ್ಯಂನವರು ಪ್ರಾಣಾಯಾಮದ ಮೂಲಕ ಬದುಕಿರಬಹುದೆಂದು ಪ್ರಜೆಗಳಿಗೆ ತಿಳಿಸುವ ನಿಮಿತ್ತ, ಸುಮಾರು ಮೂನ್ನೂರು ವರ್ಷಗಳ ಕೆಳಗೆ ಭೂಸಮಾಧಿಯಲ್ಲಿ ಸಜೀವವಾಗಿ ಕುಳಿತುಕೊಂಡಿ ದ್ದಾನೆ. ಆತನನ್ನು ಭೂಮಿಯಲ್ಲಿ ಸಮಾಧಿ ಮಾಡಿದರೂ ಆತನು ಮರಣಿಸಲಿಲ್ಲ. ಆ ವಿಷಯವನ್ನು, ನಾನು ಮರಣಿಸುವುದಿಲ್ಲ ಎಂದು ಮೊದಲೆ ಹೇಳಿ ಸಮಾಧಿ ಯೊಳಗೆ ಹೋಗಿದ್ದಾನೆ. ಆತನು ಶ್ವಾಸವನ್ನು ಕುಂಭಿಸಿ ನಿಲ್ಲಿಸುವ ವಿದ್ಯೆಯನ್ನು ಬ್ರಹ್ಮಜ್ಞಾನ ಸಮೇತವಾಗಿ ತಿಳಿದುಕೊಂಡಿದ್ದಾನೆ. ಆದ್ದರಿಂದ ಆತನು ತಾತ್ಕಾಲಿಕ ಮರಣವನ್ನು ಹೊಂದಿದರೂ ಅದು ಬ್ರಹ್ಮಯೋಗವಾಗಿದೆ. ಬ್ರಹ್ಮಯೋಗವಲ್ಲದ

ತಾತ್ಕಾಲಿಕ ಮರಣವನ್ನು, ಅವರಿಗೆ ತಿಳಿಯದೆಯೆ ಬಹಳಜನರು ಹೊಂದಿದ್ದಾರೆಂದು ಮುಂಚೆಯೇ ತಿಳಿದುಕೊಂಡಿದ್ದೇವೆ. ಅಂತಹ ತಾತ್ಕಾಲಿಕ ಮರಣದಲ್ಲಿ ಮೊದಲು ಮನಸ್ಸು ನಿಂತುಹೋಗಿ ನಂತರ ಶ್ವಾಸ ಒಳಗೆ ನಿಂತುಹೋಗಿದೆ. ಕೆಲವರು ಅದೇ ಕೆಲಸವಾಗಿ ಸಾಧನೆ ಮಾಡಿ, ಶ್ವಾಸವನ್ನು ಬಂಧಿಸಲ್ಪಟ್ಟು, ಹೊರಗೆ ಎಲ್ಲರೂ ನೋಡುವಂತೆ ಮರಣಿಸಿ, ಒಳಗೆ ಮಾತ್ರ ತಾತ್ಕಾಲಿಕ ಮರಣವನ್ನು ಹೊಂದಿ, ನಂತರ ಸ್ವಲ್ಪ ಕಾಲಕ್ಕೆ ನಿದ್ರೆಯಿಂದ ಎದ್ದಂತೆ ಎದ್ದು, ಮರಣಿಸಿ ಪುನಃ ಸ್ವಲ್ಪ ಕಾಲಕ್ಕೆ ಬದುಕಿದಂತೆ ಕಾಣಿಸುತ್ತಿದ್ದಾರೆ. ಅದೇ ಕೆಲಸ ಗೇಣು ಹೊಟ್ಟೆಗೋಸ್ಕರ ಒಬ್ಬ ಬಡವನು ಮಾಡಿದರೆ ಅದನ್ನು ನಾವು ಗಾರಡಿ ವಿದ್ಯೆ ಅನ್ನುತ್ತಿದ್ದೇವೆ. ಎಲ್ಲಾ ಸೌಕರ್ಯಗಳು ಹೊಂದಿ, ಆರ್ಥಿಕ ಸಾಮರ್ಥ್ಯವನ್ನು ಹೊಂದಿದ ಮನುಷ್ಯ ಮಾಡಿದರೆ, ಅದನ್ನು ಮಹಿಮೆ ಅನ್ನುತ್ತಿದ್ದೇವೆ, ಆತನನ್ನು ದೈವ ಸಮಾನವಾಗಿ ಹೋಲಿಸುತ್ತಿದ್ದೇವೆ.

ಅಮೇರಿಕಾ ದೇಶದಲ್ಲಿ ರೆಜ್ಲಿಂಗ್ (ಮಲ್ಲಯುದ್ಧ) ಅಥವಾ ಕುಸ್ತಿ ಎನ್ನುವ ಆಟ ಇದೆ. ಅದರಲ್ಲಿ ಪಾಲ್ಗೊಳ್ಳುವವರೆಲ್ಲರೂ ಶರೀರಧಾರುಢ್ಯ ಇರುವವರೇ ಇರುತ್ತಾರೆ. ಒಂದೊಂದುಸಲ ಆ ಆಟದಲ್ಲಿ ಸತ್ತುಹೋಗುವಷ್ಟು ಪರಿಸ್ಥಿತಿಯೂ ಸಹ ಏರ್ಪಡುತ್ತದೆ. ನಾವು ನೋಡಿದಾಗ, ಅಮೇರಿಕಾದಲ್ಲಿ ಅಂಡರ್ ಟೇಕರ್ ಎನ್ನುವ 6,9 ಇಂಚುಗಳು ಎತ್ತರವಿರುವ ಮನುಷ್ಯ. 1984ನೇ ವರ್ಷದಿಂದ ಆ ಆಟದಲ್ಲಿ ಪಾಲ್ಗೊಳ್ಳುತ್ತಿದ್ದಾನೆ. ಆತನು ಆ ಆಟದಲ್ಲಿ ಇಲ್ಲಿಗೆ ಐದುಬಾರಿ ಮರಣಿಸುವುದು ನಡೆದಿದೆ. ಆತನನ್ನು ಪೆಟ್ಟಿಗೆಯಲ್ಲಿ ಹಾಕಿ, ಪೆಟ್ಟಿಗೆ ಸಮೇತವಾಗಿ ಭೂಮಿಯಲ್ಲಿ ಹೂತಿಡುವುದು ನಡೆದಿದೆ. ಆದರೂ ಆತನು 40 ದಿನಗಳಿಗೆ ಪುನಃ ಬದುಕಿಬಂದಿದ್ದಾನೆ. ಆತನನ್ನು ಎಲ್ಲರೂ ಡೆಡ್‌ಮ್ಯಾನ್ (ಸತ್ತಿರುವ ಮನುಷ್ಯ) ಎಂದು ಅನ್ನುತ್ತಾರೆ. ಈ ವರ್ಷ ಎಂದರೆ 21–02–2011 ದಿನದಂದು ಒಂದುವರೆ ತಿಂಗಳ ಕೆಳಗೆ ಮರಣಿಸಿದ ಆ ವ್ಯಕ್ತಿ ಪುನಃ ಎದ್ದು ಬರುವುದು ನಡೆದಿದೆ. ಈ ಬಾರಿ ಆತನನ್ನು ಡೆಡ್‌ಮ್ಯಾನ್ ವಾಕಿಂಗ್ (ಸತ್ತುಹೋದ ಮನುಷ್ಯ ನಡೆಯುತ್ತಿದ್ದಾನೆ) ಎಂದು ಅಲ್ಲಿರುವ ಕೆಲವರು

ಬೋರ್ಡಿನ ಮೇಲೆ ಬರೆಯುವುದು ನಡೆದಿದೆ. ಈ ವಿಧವಾಗಿ ಆತನು ಪುನಃ ಬದುಕಿಬರುವುದರ ಹಿಂದೆ, ಎಲ್ಲರಿಗೂ ದೊಡ್ಡ ಆಶ್ಚರ್ಯವಿದೆ. ಆದರೂ ನಾವು ಹೇಳುವುದೇನೆಂದರೆ! ಆತನು ಶ್ವಾಸವನ್ನು ಬಂಧಿಸಿ ಬದುಕುವ ತಾತ್ಕಾಲಿಕ ಮರಣವನ್ನು ಸಾಧಿಸಿದ್ದಾನೆ. ಆದ್ದರಿಂದ ಕೆಲವು ಅಪಾಯಕರ ಸಮಯಗಳಲ್ಲಿ ಆತನು ತಾತ್ಕಾಲಿಕ ಮರಣದೊಳಗೆ ಹೋಗಿ, ಸ್ವಲ್ಪ ಕಾಲ ವಿಶ್ರಾಂತಿಯನ್ನು ಹೊಂದಿ ಪುನಃ ತಾಜಾವಾಗಿ ಎದ್ದು ಬರುತ್ತಿದ್ದಾನೆ. ಆತನು ತಾತ್ಕಾಲಿಕ ಮರಣವನ್ನು ಬ್ರಹ್ಮಯೋಗದಿಂದ ಹೊಂದುತ್ತಿದ್ದಾನೋ ಇಲ್ಲವೊ ಆಗಲಿ ಆತನು ಯಾವುದೊ ಒಂದು ಶಕ್ತಿಯನ್ನು ಸಾಧಿಸಿದ ವ್ಯಕ್ತಿ ಎಂದೇ ಹೇಳಬಹುದು. ತಾತ್ಕಾಲಿಕ ಮರಣವನ್ನು ಕುರಿತು ತಿಳಿದುಕೊಂಡರೆ ಇದಕ್ಕೂ ಮೊದಲೆ ಅರ್ಥವಾಗದ ಎಷ್ಟೋಪ್ರಶ್ನೆಗಳಿಗೆ ಉತ್ತರಗಳು ದೊರೆಯುತ್ತವೆ.



## ತಾತ್ಕಾಲಿಕ ಮರಣದಿಂದ ಆಯುಸ್ಸು ಹೆಚ್ಚಾಗುತ್ತದೆಯಾ?

ಆಯುವು ಎನ್ನುವ ಪದವು ಬದಲಾವಣೆಹೊಂದಿರುವುದಾಗಿದೆ ಎಂದು, **ಆಯುವು ಎನ್ನುವ ಪದ ಮೊದಲು ವಾಯುವು** ಎನ್ನುವ ಪದವಾಗಿ ಇತ್ತೆಂದು, ಕಾಲಕ್ರಮವಾಗಿ ವಾಯುವು ಎನ್ನುವ ಶಬ್ದವು ಆಯುವು ಎನ್ನುವ ಶಬ್ದವಾಗಿ ಬದಲಾಗಿಹೋಗಿ, ಆಯುವು ಎನ್ನುವ ಮಾತಾಗಿಯೆ ಕರೆಯಲಾಗುತ್ತಿದೆ. ಮನುಷ್ಯನ ಹುಟ್ಟಿನಲ್ಲಿಯೇ ಆತನು ಎಷ್ಟು ಕಾಲ ಜೀವಿಸಬೇಕೋ ನಿರ್ಣಯಿಸಲ್ಪಡುತ್ತಿದೆ. ಪ್ರಾರಬ್ಧಕರ್ಮ ನಿರ್ಣಯದಲ್ಲಿ ಪ್ರತಿ ಜೀವರಾಶಿ ಆಯುಸ್ಸು ಇರುತ್ತದೆ, ಮನುಷ್ಯನ ಆಯುವು ಆತನ ಶ್ವಾಸದ ಮೇಲೆ ಆಧಾರಪಟ್ಟಿರುತ್ತದೆ. ಒಬ್ಬನು ಭೂಮಿ ಮೇಲೆ ಇಷ್ಟುಕಾಲ ಬದುಕಬೇಕೆಂದು ಪ್ರಾರಬ್ಧ ಕರ್ಮದಲ್ಲಿ ಇರುವುದಿಲ್ಲ. ಒಬ್ಬನು ಇಷ್ಟು ಶ್ವಾಸಗಳವರೆಗೂ ಬದುಕಬೇಕೆಂದು ಇರುತ್ತದೆ. ಕೆಲವು ಕೋಟಿಗಳು, ಕೆಲವು ಲಕ್ಷಗಳು, ಕೆಲವು ಸಾವಿರ ಶ್ವಾಸಗಳು ನಡೆಯಬೇಕೆಂದು ಮನುಷ್ಯನ ಜೀವನವು ನಿರ್ಣಯಿಸಲ್ಪಟ್ಟಿರುವುದರಿಂದ, ಆತನ ಜೀವನ ಆತನ ಶ್ವಾಸಗಳು ಮುಗಿದು ಹೋಗುವುದನ್ನನುಸರಿಸಿ ಇರುತ್ತದೆಂದು ದೊಡ್ಡವರು

ಹೇಳುತ್ತಿದ್ದರು. ಮನುಷ್ಯನ ಜೀವನವು ಆತನ ಶ್ವಾಸಗಳ ಮೇಲೆ ಆಧಾರಪಟ್ಟಿದೆ ಎಂದು, ಶ್ವಾಸಗಳು ಗಾಳಿಯಿಂದ ಕೂಡಿಕೊಂಡಿವೆ ಎಂದು, ಮನುಷ್ಯ ಬದುಕುವ ಕಾಲ ಆತನ ಮೂಗಿನ ರಂಧ್ರದಲ್ಲಿ ಚಲಿಸುವ ವಾಯುವಿನ ಮೇಲೆ ಆಧಾರ ಪಟ್ಟಿರುತ್ತದೆಂದು ಎಲ್ಲರಿಗೂ ತಿಳಿಯುವಂತೆ, ಮನುಷ್ಯನಿಗೆ ವಾಯುವು ಮೊದಲೆ ನಿರ್ಣಯಿಸಲ್ಪಟ್ಟಿದೆ ಎಂದು ತಿಳಿದ ಜ್ಞಾನಿಗಳು ಹೇಳುತ್ತಿದ್ದರು. ಮೂಗಿನ ರಂಧ್ರಗಳಲ್ಲಿ ಆಡುವ ವಾಯುವನ್ನು ಕೊನೆಗೆ ಆಯುವು ಎನ್ನುವುದು ನಡೆದಿದೆ. ಒಬ್ಬ ಮನುಷ್ಯನ ಆಯುವು (ವಾಯುವು) ಆ ಮನುಷ್ಯ ತೆಗೆದುಕೊಳ್ಳುವ ಶ್ವಾಸದ ಮೇಲೆ ಆಧಾರಪಟ್ಟಿರುತ್ತದೆ. ಅದರಿಂದ ಮನುಷ್ಯನ ಜೀವನದಲ್ಲಿ ಶ್ವಾಸ ಎಷ್ಟೋ ಪ್ರಾಧಾನ್ಯತೆ ಹೊಂದಿದೆ. ಒಬ್ಬ ಮನುಷ್ಯನ ಜೀವನ ಕಾಲಕ್ಕೆ ಅಳತೆ ಪರಿಮಾಣವಾಗಿ ಶ್ವಾಸ ಇರುವುದಲ್ಲದೆ ಮನಷ್ಯನ ಜನ್ಮದಲ್ಲಿಯೂ, ಮನುಷ್ಯನ ಮರಣದಲ್ಲಿಯೂ ಶ್ವಾಸ ಮುಖ್ಯಪಾತ್ರವನ್ನು ಪೋಷಿಸುತ್ತದೆ. ಮನುಷ್ಯನ ಶರೀರದೊಳಗೆ ಪ್ರವೇಶಿಸುವ ಮೊದಲ ಶ್ವಾಸ ಜನನವೆಂದು, ಮನುಷ್ಯನ ಶರೀರದಿಂದ  ಹೊರಗೆ ಹೋಗುವ ಕೊನೆಯ ಶ್ವಾಸ ಮರಣವೆಂದು ಹೇಳಿಕೊಂಡಿದ್ದೇವೆ. ಇದರಿಂದ ಇತ್ತ ಮರಣವನ್ನಾಗಲಿ, ಅತ್ತ ಜನನವನ್ನಾಗಲಿ, ಶ್ವಾಸವನ್ನನುಸರಿಸಿ ಹೇಳಬಹುದೆಂದು ತಿಳಿಯುತ್ತದೆ.

ಮನುಷ್ಯನ ಜೀವನದಲ್ಲಿ ಶ್ವಾಸ ಮುಖ್ಯಪಾತ್ರವನ್ನು ಪೋಷಿಸುತ್ತದೆ ಎಂದು ತಿಳಿದುಕೊಂಡ ಆಧ್ಯಾತ್ಮಿಕ ತಜ್ಞರು, ಶ್ವಾಸದ ಮೇಲೆ ಸ್ವಲ್ಪ ಪರಿಶೋಧನೆ ಮಾಡಿ, ಶ್ವಾಸದಿಂದ ಜೀವಿತ ಕಾಲವನ್ನು ಹೆಚ್ಚಿಸಿಕೊಳ್ಳಬಹುದೆಂದು ಕಂಡುಕೊಂಡಿದ್ದಾರೆ. ಜೀವಿತಕಾಲಕ್ಕೆ ಸರಿಹೋಗುವ ಶ್ವಾಸಗಳು ಮುಂಚೆಯೆ ನಿರ್ಣಯಿಸಲ್ಪಟ್ಟಿರುತ್ತವೆಂದು ತಿಳಿದ ಜ್ಞಾನಿಗಳು, ಶ್ವಾಸವನ್ನು ಬದಲಾಯಿಸಿ ಕೊಳ್ಳುವುದರಿಂದ ಜೀವಿತಕಾಲವನ್ನು ಸಹ ಹೆಚ್ಚಿಸಿಕೊಳ್ಳಬಹುದೆಂದು ಹೇಳಿದ್ದಾರೆ. ಹಾಗೆ ಹೇಳುವುದಲ್ಲದೆ ಮೊದಲೇ ನಿರ್ಣಯಿಸಲ್ಪಟ್ಟ ಜೀವಿತ ಕಾಲವನ್ನು ಹೆಚ್ಚಿಸಿ ಕೊಂಡು ನಿರೂಪಣೆ ಮಾಡಿ ತೋರಿಸಿದ್ದಾರೆ. ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ, ಆಧ್ಯಾತ್ಮಿಕ ರಂಗದಲ್ಲಿ ಮಾಡಿದ ಪರಿಶೋಧನೆಯಿಂದ ಆಯುಸ್ಸನ್ನು ಹೆಚ್ಚಿಸಿಕೊಳ್ಳು

ವುದು ಸಾಧ್ಯವೆಯೆಂದು, ಅದು ಕರ್ಮ ಸಿದ್ಧಾಂತಕ್ಕೆ ಒಳಪಟ್ಟಿದೆ ಎಂದು ನಮ್ಮ ಜ್ಞಾನಿಗಳು ತಿಳಿಸಿದ್ದಾರೆ. ಪೂರ್ವದಲ್ಲಿ ಜ್ಞಾನಿಗಳು ತಿಳಿಸಿರುವುದನ್ನು ಅನುಸರಿಸಿ ನಂತರ ಅವರು ಆ ವಿಷಯವನ್ನು ತಿಳಿದುಕೊಂಡು ಆಚರಿಸಿ ಆಯುಸ್ಸನ್ನು ಹೆಚ್ಚಿಸಿಕೊಂಡಿದ್ದಾರೆ. ಆಧ್ಯಾತ್ಮಿಕದ ಪ್ರಕಾರ ಆಯುಸ್ಸನ್ನು ಹೆಚ್ಚಿಸಿಕೊಳ್ಳುವುದರಲ್ಲಿ ತಾತ್ಕಾಲಿಕ ಮರಣವು ಮುಖ್ಯ ಪಾತ್ರ ಪೋಷಿಸಿದೆ. ಶ್ರೀ ಪೋತುಲೂರಿ ವೀರಬ್ರಹ್ಮಯ್ಯನವರು ತಾನು ಜೀವಸಮಾಧಿ ಹೊಂದಿ, ಸಮಾಧಿಯಲ್ಲಿಯೆ ಸುಮಾರು ಮೂನ್ನೂರು ವರ್ಷಗಳು ಸಜೀವವಾಗಿ ಇದ್ದಾನೆ. **ಜೀವಸಮಾಧಿ ಎಂದರೆ ಜೀವನವನ್ನು ಶಾಸಿಸುವ ಶ್ವಾಸವನ್ನು ಶರೀರದಲ್ಲಿಯೆ ಸಮಾಧಿ ಮಾಡುವುದೆಂದು ಅರ್ಥ**. ಶರೀರವನ್ನು ಭೂಮಿಯಲ್ಲಿ ಕಾಣಿಸದಂತೆ ಹೂತಿಟ್ಟರೆ ಅದು ಸಮಾಧಿ ಆಗುತ್ತದೆ, ಶರೀರದಲ್ಲಿ ಆಡುವ ಶ್ವಾಸ ಕಾಣಿಸದಂತೆ ಶರೀರದಲ್ಲಿಯೆ ಹೂತಿಟ್ಟರೆ ಅದು ಜೀವಸಮಾಧಿ ಆಗುತ್ತದೆ. ಅದರಲ್ಲಿ ಸಹ ಜೀವಿಯು ಶರೀರದಲ್ಲಿಯೆ ಇರುತ್ತಾನೆ. ಆದ್ದರಿಂದ ಅದನ್ನು ಸಜೀವ ಸಮಾಧಿ ಎಂದೂ ಸಹ ಅನ್ನಬಹುದು. ವೀರಬ್ರಹ್ಮಯ್ಯನವರು ಹೊಂದಿರುವುದನ್ನು ಸಜೀವ ಸಮಾಧಿ ಎಂದಾಗಲಿ, ಜೀವಸಮಾಧಿ ಎಂದಾಗಲಿ ಅನ್ನಬಹುದು.

ಶಾಲಿವಾಹನ ಶಕ ಪ್ರಾರಂಭಕ್ಕೆ ಮುನ್ನ, ವಿಕ್ರಮಾರ್ಕನು ಉಜ್ಜಯನಿ ಪಟ್ಟಣವನ್ನು ರಾಜಧಾನಿಯಾಗಿ ಮಾಡಿಕೊಂಡು, ಸ್ವಲ್ಪ ರಾಜ್ಯವನ್ನು ಪರಿಪಾಲಿಸಿದ ಚರಿತ್ರೆ ನಮ್ಮ ದೇಶದಲ್ಲಿ ಇದೆ. ವಿಕ್ರಮಾರ್ಕನಿಗಿರುವ ಮೂವರು ತಮ್ಮಂದಿರಲ್ಲಿ ಭಟ್ಟಿ ಎನ್ನುವ ಹೆಸರಿರುವ ವ್ಯಕ್ತಿ ಒಬ್ಬನಿದ್ದನು. ಭಟ್ಟಿ ವೈಶ್ಯಜಾತಿ ಸ್ತ್ರೀಗೆ ಹುಟ್ಟಿದ ಕ್ಷತ್ರಿಯನು. ವಿಕ್ರಮಾರ್ಕನಿಗೆ, ಭಟ್ಟಿಗೆ ತಂದೆ ಒಬ್ಬನೇ ಆಗಿರುವುದರಿಂದ ಭಟ್ಟಿ ಸ್ವತಃ ತಮ್ಮನಾಗುತ್ತಾನೆ. ಪರಾಕ್ರಮದಲ್ಲಿ ವಿಕ್ರಮಾರ್ಕನು ಹೆಸರುವಾಸಿ ಯಾದವನಾದ್ದರಿಂದ, ಬುದ್ಧಿಯೊಂದರ ಕೆಲಸದಲ್ಲಿ ಭಟ್ಟಿ ದೊಡ್ಡ ಮೇಧಾವಿ. ವಿಕ್ರಮಾರ್ಕನು ಮೇಧಾಶಕ್ತಿಯಲ್ಲಿ ದೊಡ್ಡವನಾದ ಭಟ್ಟಿಯನ್ನು ತನ್ನ ಪ್ರಧಾನಮಂತ್ರಿ ಯಾಗಿ ಇಟ್ಟುಕೊಂಡಿದ್ದಾನೆ. ಭಟ್ಟಿ ವಿಕ್ರಮಾರ್ಕರು ಇಬ್ಬರೂ ಆಧ್ಯಾತ್ಮಿಕ ಚಿಂತನೆ ಹೊಂದಿದವರೆ ಆಗಿರುವುದರಿಂದ, ಅವರು ಶ್ವಾಸದ ರಹಸ್ಯವನ್ನು

ತಿಳಿದುಕೊಂಡಿದ್ದಾರೆ. ಅವರು ಪ್ರಾರಬ್ಧ ಕರ್ಮವನ್ನು ಅನುಸರಿಸಿ ನಿರ್ಣಯಿಸಲ್ಪಟ್ಟ ಶ್ವಾಸಗಳನ್ನು ತಾತ್ಕಾಲಿಕ ಮರಣದ ಮೂಲಕ ನಿಲ್ಲಿಸಿ, ಅವರ ಆಯುಸ್ಸನ್ನು ಹೆಚ್ಚಿಸಿಕೊಂಡಿದ್ದಾರೆ. ಭಟ್ಟಿ ವಿಕ್ರಮಾರ್ಕರು ಇಬ್ಬರು ಆರು ತಿಂಗಳು ಮಾತ್ರ ರಾಜ್ಯವನ್ನು ಪರಿಪಾಲಿಸಿ, ರಾಜ್ಯದ ಕೆಲಸಗಳನ್ನು ಸರಿಪಡಿಸಿ, ಆರು ತಿಂಗಳು ಅರಣ್ಯಕ್ಕೆ ಹೋಗಿ ತಾತ್ಕಾಲಿಕ ಮರಣವನ್ನು ಹೊಂದುತ್ತಿದ್ದರು. ಆ ವಿಧವಾಗಿ ಅವರು ಒಂದು ವರ್ಷದಲ್ಲಿ ಆರು ತಿಂಗಳು ಜೀವನವೂ, ಆರು ತಿಂಗಳು ತಾತ್ಕಾಲಿಕ ಮರಣವನ್ನೂ ಹೊಂದುತ್ತಿದ್ದರು. ಹಾಗೆ ಮಾಡುತ್ತಾ ಅವರು ಎರಡು ಸಾವಿರ ವರ್ಷಗಳು ಬದುಕಿದ್ದಾರೆ. ಮಹಾಭಾರತದಲ್ಲಿನ ಭೀಷ್ಮನು ಸಹ ಆಗಾಗ ತಾತ್ಕಾಲಿಕ ಮರಣವನ್ನು ಆಶ್ರಯಿಸುತ್ತಾ 380 ವರ್ಷಗಳು ಬದುಕಿದ್ದಾನೆ. ಮೂರನೆ ಮರಣವಾದ ತಾತ್ಕಾಲಿಕ ಮರಣ ರಹಸ್ಯ ತಿಳಿದ ಕೆಲವರು, ರಾತ್ರಿ ಸಮಯ ಶ್ವಾಸವನ್ನು ಬಂಧಿಸಿ ಮೂರನೆ ಮರಣವನ್ನು ಹೊಂದಿ, ಪುನಃ ಹಗಲು ತಮ್ಮ ಕಾರ್ಯಗಳನ್ನು ತಾವು ಮಾಡುಕೊಳ್ಳುತ್ತಿದ್ದರು. ಈ ವಿಧವಾಗಿ ಪೂರ್ವದಲ್ಲಿ ಎಷ್ಟೋಜನ ತಾತ್ಕಾಲಿಕ ಮರಣವನ್ನು ತಮಗೆ ಅನುಕೂಲವಾದ ಸಮಯದಲ್ಲಿ ಹೊಂದುತ್ತಾ ತಮ್ಮ ಆಯುಸ್ಸನ್ನು ಹೆಚ್ಚಿಸಿಕೊಂಡು ಕೆಲವು ನೂರಾರು, ಕೆಲವು ಸಾವಿರ ವರ್ಷಗಳ ಆಯುಸ್ಸನ್ನು ಹೊಂದಿ ಜೀವಿಸಿದ್ದಾರೆ.

ಈಗಿನ ಕಾಲದಲ್ಲಿ ವಿಜ್ಞಾನ ಬೆಳೆದುಹೋಗಿ, ಅಭೌತಿಕ ಅಜ್ಞಾನ ಬೆಳೆದುಹೋಗಿದೆ. ಈಗ ಭೌತಿಕ ಜ್ಞಾನ ಮಾತ್ರ ಇರುವವರಿಗೆ ಅಭೌತಿಕದಿಂದ ಅನುಸಂಧಾನವಾದ ಅಕಾಲ ಮರಣವಾಗಲಿ, ತಾತ್ಕಾಲಿಕ ಮರಣವಾಗಲಿ ತಿಳಿಯದಂತೆಹೋಗಿದೆ. ಈಗಿನ ಕಾಲದಲ್ಲಿ ಯಂ.ಬಿ.ಬಿ.ಯಸ್ ಓದಿದವರಾಗಲಿ, ಯಂ.ಡಿ ಓದಿದ ಡಾಕ್ಟರ್‌ಗಳಾಗಲಿ ತಾವು ಕಲಿತುಕೊಂಡ ವಿಜ್ಞಾನದಿಂದ ಭೌತಿಕವಾಗಿರುವ ಮರಣವನ್ನಾಗಲಿ, ಭೌತಿಕವಾಗಿರುವ ಜನ್ಮವನ್ನಾಗಲಿ ಗುರ್ತಿಸಲಾರದೆ ಹೋಗುತ್ತಿದ್ದಾರೆ. ನಾವು ಈ ಮಾತಂದರೆ ಕೆಲವರಿಗೆ ನಮ್ಮ ಮೇಲೆ ಕೋಪ ಬರಬಹುದು. ಹಾಗೆ ಅವರು ಮೋಸಹೋಗುತ್ತಿದ್ದಾರೆನ್ನುವುದಕ್ಕೆ ಎಷ್ಟೋ ಕಾರಣಗಳು ಇವೆ. ನಮ್ಮ ಮಾತು ನಿಜವೆನ್ನುವುದಕ್ಕೆ ಒಂದು

ಸಂಘಟನೆಯನ್ನು ವಿವರಿಸುತ್ತೇವೆ ನೋಡಿ. 05.03.2011 ಶನಿವಾರ ಬಹುಶ ಟೀವಿ 9 ಛಾನಲ್‌ನಲ್ಲಿ ಒಂದು ವಾರ್ತಾ ಕಥನ ಬಂದಿದೆಯಂತೆ. ನಾವು ಆ ದಿನ ಪ್ರಯಾಣದಲ್ಲಿ ಇದ್ದೇವಾದ್ದರಿಂದ ಪ್ರತ್ಯಕ್ಷವಾಗಿ ನೋಡಲಿಲ್ಲ. ಆದರೆ ನಮ್ಮ ಅನುಚರರು ನೋಡಿ ಹೇಳಿದ ವಿಷಯ ಹೀಗೆ ಇದೆ. ಒಂದುಕಡೆ ಅಪಘಾತ ನಡೆದಾಗ ಒಬ್ಬ ವಿದ್ಯಾರ್ಥಿನಿ ಗಾಯವಾಗಿ ಸಾವುಬದುಕುಗಳ ಸ್ಥಿತಿಯಲ್ಲಿರುವಾಗ ಡಾಕ್ಟರ್ ಹತ್ತಿರಕ್ಕೆ ತೆಗೆದುಕೊಂಡು ಹೋಗುವುದು ನಡೆದಿದೆ. ಆಗ ಡಾಕ್ಟರ್‌ರವರು ಚಿಕಿತ್ಸೆ ಮಾಡಿದರೂ ಆಕೆ ಬದುಕಲಿಲ್ಲ. ಅಪಾಯ ಸ್ಥಿತಿಯಲ್ಲಿರುವ ಆಕೆ ಮರಣಿಸುವುದು, ಚಿಕಿತ್ಸೆ ಮಾಡಿಸಿದರು ಬದಕದೆಹೋಗುವುದು ಸಹಜವಾಗಿ ನಡೆಯುವ ಕೆಲಸವೆ. ಆದ್ದರಿಂದ ಆಕೆಯ ಮರಣವನ್ನು ಕುರಿತು ಯಾರು ಏನು ಅಂದುಕೊಳ್ಳಲಿಲ್ಲ. ಡಾಕ್ಟರ್ ಆಕೆ ಮರಣಿಸಿದಂತೆ ಧೃಢೀಕರಣ ಪತ್ರವು ಸಹ ಕೊಟ್ಟಿದ್ದಾನಂತೆ. ಆಗ ಆ ಶವವನ್ನು ಮನೆಗೆ ತೆಗೆದುಕೊಂಡು ಹೋಗುವುದು, ನಂತರ ಅಂತ್ಯಕ್ರಿಯೆಗಳಿಗೆ ಏರ್ಪಾಟು ಮಾಡಿಕೊಂಡು ಸ್ಮಶಾನಕ್ಕೆ ತೆಗೆದುಕೊಂಡು ಹೋಗುವುದು ನಡೆದಿದೆ.

ಸ್ಮಶಾನಕ್ಕೆ ಹೋದ ನಂತರ ಶವವನ್ನು ಇಳಿಸಿ, ಮಾಡಬೇಕಾದ ಕಾರ್ಯಗಳನ್ನು ಮಾಡಿ ಕೊನೆಗೆ ಮೃತದೇಹವನ್ನು ಕುಣಿಯಲ್ಲಿ ಇಡುವ ಸಮಯದಲ್ಲಿ ಅಲ್ಲಿಯವರೆಗು ಶವವಾಗಿರುವ ಆಕೆ ಬದುಕುವುದು ನಡೆದಿದೆ. ಆಗ ಅಲ್ಲಿರುವವರೆಲ್ಲರೂ. ಇದಕ್ಕೆಲ್ಲವೂ ಕಾರಣ ಆಕೆ ಮರಣಿಸಿದ್ದಾಳೆಂದು ಸುಳ್ಳು ಹೇಳಿದ ಡಾಕ್ಟರ್ ಎಂದು, ಆತನ ಹತ್ತಿರಕ್ಕೆ ಹೋಗಿ ವಾದಿಸಿದ್ದಾರೆ. ಆ ವಿಷಯವನ್ನು ಕೇಳಿದ ಡಾಕ್ಟರ್ ಸಹ ಆಶ್ಚರ್ಯಪಟ್ಟು, ಇರುವುದು ಇದ್ದಹಾಗೆ ಹೇಳಿದ್ದಾನಂತೆ. "ಆಕೆಗೆ ಚಿಕಿತ್ಸೆ ಮಾಡಿದರು ಆಕೆ ಬದುಕಲಿಲ್ಲ. ನಾನು ಓದಿದ ವೈದ್ಯಶಾಸ್ತ್ರದ ಪ್ರಕಾರ ನಿಜವಾಗಲು ಆಕೆ ಮರಣಿಸಿದ್ದಾಳೆ. ಎಲ್ಲಾ ಪರೀಕ್ಷೆಗಳು ಮಾಡಿ 20 ನಿಮಿಷಗಳ ನಂತರವೇ ನಾನು ಆಕೆ ಮರಣಿಸಿದಂತೆ ನಿರ್ಧಾರಿಸಿದ್ದೇನೆ ನಂತರವೆ ನಿಮಗೆ ಮರಣಿಸಿದ್ದಾಳೆ ಎಂದು ಹೇಳಿದ್ದೇನೆ." ಇದರಲ್ಲಿ ನನ್ನ ತಪ್ಪು ಏನೂ ಇಲ್ಲ. ಆಕೆ ಆಗ ಮರಣಿಸಿದ್ದಾಳೆ, ಈಗ ಬದುಕಿದ್ದಾಳೆ. ಈ

ವಿಷಯವು ದೇವರಿಗೆ ಹೊರತು ಯಾರಿಗೂ ತಿಳಿದಿಲ್ಲ ಎಂದಿದ್ದಾನಂತೆ. ಇದು ನಿನ್ನೆ ಟೀವಿಯಲ್ಲಿ ಬಂದಿರುವ ತಾಜಾ ಸಮಾಚಾರವಾಗಿದ್ದು, ಈ ಮಧ್ಯ ನಡೆದ ತಾಜಾ ಸಮಾಚಾರವು ಮತ್ತೊಂದು ನಮಗೆ ತಿಳಿದಿದೆ. ಅದು ಏನೆಂದರೆ!

ಅನಂತಪುರ ಜಿಲ್ಲೆಯಲ್ಲಿ ಒಂದು ಹಳ್ಳಿಯಲ್ಲಿ ಒಂದು ಬಡ ಕುಟುಂಬವು ಇದೆ. ಆ ಕುಟುಂಬದಲ್ಲಿ ಕುಂಟುಕಾಲಿರುವ ಹೆಣ್ಣು ಮಗಳು ಇದ್ದಳು. ಆಕೆ ಅನಾರೋಗ್ಯದಿಂದ ಸತ್ತುಹೋಗುವುದು ನಡೆದಿದೆ. ಮದುವೆಯಾಗದ ಹುಡುಗಿಯಾಗಿದ್ದರಿಂದ, ಅದರಲ್ಲೂ ಅವರು ಬಡವರಾದ್ದರಿಂದ, ಆ ಶವವನ್ನು ಚಟ್ಟದ ಮೇಲೆ ಎತ್ತುಕೊಂಡುಹೋಗುವುದಕ್ಕೂ ಸಹ ಸಾಮರ್ಥ್ಯ ಇಲ್ಲದಿರುವು ದರಿಂದ ಕೊನೆಗೆ ತಂದೆ ಮಗ ಇಬ್ಬರು ಸ್ಮಶಾನಕ್ಕೆ ಆ ಶವವನ್ನು ಭುಜದ ಮೇಲೆ ಹೊತ್ತುಕೊಂಡು ಹೋಗಿದ್ದಾರೆ. ಹಾಗೆ ಭುಜದ ಮೇಲೆ ಹೊತ್ತುಕೊಂಡು ಹೋಗಿ ಅಕೆ ಶವವನ್ನು ಕೆಳಗೆ ಮಲಗಿಸಿ ಒಬ್ಬರು ಕುಣಿಯೊಳಗೆ ಇಳಿದು ಒಬ್ಬರು ಮೇಲಿಂದ ಶವವನ್ನು ಕುಣಿಯೊಳಗೆ ಇಳಿಸಬೇಕೆಂದು ಕೊಂಡಿದ್ದಾರೆ. ಮಲಗಿಸಿದ ಶವವನ್ನು ಹಿಡಿದುಕೊಂಡು ಮೇಲಕ್ಕೆ ಎತ್ತುತ್ತಲೇ, ಆ ಶವವು ಸಜೀವವಾಗಿ ಬದುಕಿದೆಯಂತೆ. ಆಗ ಅವರು ಬಗೆದಿರುವ ಕುಣಿಯನ್ನು ಖಾಲಿಯಾಗಿ ಮುಚ್ಚಬಾರದೆಂದು ಒಂದು ಕೋಳಿಯನ್ನು ಸಾಯಿಸಿ ಆ ಕುಣಿಯಲ್ಲಿ ಹಾಕಿ ಮುಚ್ಚಿದ್ದಾರೆ. ತಮ್ಮ ಮಗಳು ಬದುಕಿದ ವಿಷಯ ಆ ತಂದೆಯಾಗಲಿ, ಅಣ್ಣನಾಗಲಿ ಎಲ್ಲಿಯೂ ಯಾರಿಗೂ ಹೇಳಲಿಲ್ಲ. ಈ ವಿಧವಾಗಿ ಹೊರಗೆ ತಿಳಿಯದ ಸಂಘಟನೆಗಳು ಸಹ ಎಷ್ಟೋ ಇವೆಯೆಂದು ತಿಳಿಯುತ್ತದೆ.

ನಾವು ತಿಳಿದುಕೊಳ್ಳುವಂತಹ ಇನ್ನೊಂದು ಮುಖ್ಯವಾದ ವಿಷಯ ವೇನೆಂದರೆ! ತಾತ್ಕಾಲಿಕ ಮರಣವನ್ನು ಕುರಿತು ತಿಳಿಯದ ಅಜ್ಞಾನಿಗಳು ಸಹಿತವು ತಾತ್ಕಾಲಿಕ ಮರಣವನ್ನು ಹೊಂದುತ್ತಿದ್ದಾರೆ. ಮೂರನೆ ಮರಣವನ್ನು ಕುರಿತು ತಿಳಿಯದ ವ್ಯಕ್ತಿಗಳು ಅವರ ಕರ್ಮಾನುಸಾರವೆ ಮೂರನೆ ಮರಣವನ್ನು ಹೊಂದಿದರೂ, ಅತ್ತ ಅದು ಅವರಿಗೂ ತಿಳಿಯದು, ಇತ್ತ ನಮಗೂ ತಿಳಿಯದು. ಗತ ಕಾಲದಲ್ಲಿ ಅಕಾಲ ಮರಣವನ್ನು ಹೊಂದಿದ ವ್ಯಕ್ತಿಗಳು ಸೂಕ್ಷ್ಮಶರೀರದಲ್ಲಿದ್ದು,

ಸ್ಥೂಲ ಶರೀರದಿಂದ ಬದುಕಿರುವವರೊಳಗೆ ಸೇರಿ, ಅವರ ಶ್ವಾಸವನ್ನು ಒಳಗೆ ಬಂಧಿಸಿ ಹೊರಗಿನವರು ಅವರು ನೋಡುವುದಕ್ಕೆ ಸತ್ತುಹೋದಂತೆ ಭ್ರಮಿಸುವಂತೆ ಮಾಡುತ್ತಿದ್ದರು. ಶ್ವಾಸ ಮೂಗಿನ ರಂಧ್ರಗಳಲ್ಲಿ ಇಲ್ಲದಷ್ಟು ಮಾತ್ರಕ್ಕೆ ಮರಣಿಸಿದ್ದಾನೆಂದು ನಿರ್ಣಯಿಸುವ ಮನುಷ್ಯರು ಅವನನ್ನು ಮಣ್ಣು ಮಾಡುತ್ತಿದ್ದಾರೆ. ನಿಜಕ್ಕೆ ಅವನ ಶ್ವಾಸ ಶರೀರದಲ್ಲಿಯೇ ಇರುವುದು ಯಾರಿಗೂ ತಿಳಿದಿಲ್ಲ. ಸೂಕ್ಷ್ಮಶರೀರಗಳು (ದೆವ್ವಗಳು) ಸಹ ಈ ವಿಧವಾಗಿ ಇತರರ ಶರೀರದಲ್ಲಿನ ಶ್ವಾಸವನ್ನು ಕದಲದಂತೆ ಒಳಗೆ ಇರುವಂತೆ ಮಾಡಿ, ಬದುಕಿರುವವನನ್ನು ಮರಣಿಸಿದಂತೆ ತೋರಿಸುತ್ತವೆ. ಸೂಕ್ಷ್ಮಗಳು ಈ ವಿಧವಾಗಿ ಮನುಷ್ಯರನ್ನು ಅಲ್ಲಲ್ಲಿ ತಾತ್ಕಾಲಿಕ ಮರಣದೊಳಗೆ ಕಳುಹಿಸಿ, ಅವರೆ ಸತ್ತುಹೋದಂತೆ ತೋರಿಸುವುದರಿಂದ ನಾವು ಭ್ರಮಿಸಿ ವಾಸ್ತವವನ್ನು ತಿಳಿದುಕೊಳ್ಳದೆ ಹೋಗುತ್ತಿದ್ದೇವೆ. ಭೂಮಿ ಮೇಲೆ ದೆವ್ವಗಳು ಸಹ ಇಂತಹ ಕೆಲಸವನ್ನು ಮಾಡುತ್ತವೆ ಎಂದು ಯಾರಿಗೂ ತಿಳಿದಿಲ್ಲ.

ಈ ಜನನ ಮರಣ ವಿಷಯಗಳಲ್ಲಿ ಭೌತಿಕ ಶಾಸ್ತ್ರಜ್ಞರು ಸಹ ತಪ್ಪಾಗಿ ತಿಳಿಯುತ್ತಿದ್ದಾರೆ. ಆದ್ದರಿಂದ ಜನನ, ಮರಣಗಳ ವಿಷಯಗಳನ್ನು ತಿಳಿಸುವುದಕ್ಕೆ 1980ನೆ ವರ್ಷದಲ್ಲಿ ನಾವು **“ಜನನ ಮರಣ ಸಿದ್ಧಾಂತ”** ಎನ್ನುವ ಗ್ರಂಥವನ್ನು ಬರೆದಿದ್ದೇವೆ. ಈಗ ಮೂರನೇ ಮರಣವಾದ ತಾತ್ಕಾಲಿಕ ಮರಣವನ್ನು ಕುರಿತು ತಿಳಿಸುವ ನಿಮಿತ್ತ **“ಮರಣ ರಹಸ್ಯ”** ಎನ್ನುವ ಈ ಸಣ್ಣ ಗ್ರಂಥವನ್ನು ಬರೆಯುವುದು ನಡೆದಿದೆ. ನಾವು ಹೇಳುವವೆಲ್ಲವೂ ಸಂಚಲನಾತ್ಮಕ ವಿಷಯಗಳೆ ಎಂದು ಹೇಳುವುದಕ್ಕೆ ಈ ಗ್ರಂಥವು ನಿದರ್ಶನವಾಗಿ ನಿಲ್ಲುತ್ತದೆಂದು ತಿಳಿಸುತ್ತಾ ಇಲ್ಲಿಗೆ ಮುಗಿಸುತ್ತಿದ್ದೇವೆ.

**ಶಿಶುವಿನ ಒಳಗೆ ಶ್ವಾಸ ಬಾರದೆ ಮರಣಿಸಿದ್ದಾನೆನ್ನುವುದು**
**ಮನುಷ್ಯನ ಹೊರಗೆ ಶ್ವಾಸ ಹೋಗದೆ ಮರಣಿಸಿದ್ದಾನೆನ್ನುವುದು** } ಅಜ್ಞಾನವಾಗದೆ ವಿಜ್ಞಾನವಾಗುತ್ತದಾ?



ಹಿಂದೂ ಪದಕ್ಕೆ ನಿರ್ವಚನ ತಿಳಿಯದೆಂದು ಕೇಂದ್ರ ಹೋಂಶಾಖ ತಿಳಿಸಿತು. ಹಿಂದೂ ಪದದ ನಿರ್ವಚನ ಹೇಳಬೇಕೆಂದು ಮಧ್ಯಪ್ರದೇಶ್‌ಗೆ ಸೇರಿದ ಚಂದ್ರ ಶೇಖರ್ ಗೌರ್ ಎಂಬ ವ್ಯಕ್ತಿ ಸಮಾಚಾರ ಹಕ್ಕಿನ ಕಾನೂನಿಗೆ ಮಾಡಿಕೊಂಡ ಪಿಟೀಷನ್‌ಗೆ ಉತ್ತರ ಕೊಡುತ್ತಾ ಹೋಂಶಾಖ ಮೇಲಿನ ರೀತಿಯಲ್ಲಿ ಸ್ಪಂದಿಸಿತು. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರ ಇಲ್ಲವೆಂದು ಕೇಂದ್ರ ಪೌರ ಸಂಬಂಧಗಳ ಶಾಖಾಧಿಕಾರಿ ಗುರತಿಸಿದಂತೆ ಕೇಂದ್ರ ತಿಳಿಸಿತು. ಎಂತಹ ನಿರ್ವಚನ ಇಲ್ಲದಿರುವಾಗ ಇಂತಹ ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿ ಸುತ್ತಿದ್ದೀರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟೀ ಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದೀರೆಂದು ಗೌರ್ ಪ್ರಶ್ನಿಸಿದ್ದಾರೆ.

ಓದಿಸಿರಿ!!

# ದ್ರಾವಿಡ ಬ್ರಾಹ್ಮಣ

ಭಾರತದೇಶ ಸ್ಥಿತಿಯನ್ನು ಕಣ್ಣಿಗೆ ಕಾಣಿಸುವಂತೆ ಶಾಸ್ತ್ರಬದ್ಧವಾಗಿ ವಿವರಿಸುತ್ತಾ, ಭಾರತದೇಶವನ್ನೇ ದ್ರಾವಿಡ ದೇಶವೆನ್ನುತ್ತಿದ್ದರೆಂಬ ವಿಷಯವನ್ನು ತಿಳಿಸುತ್ತಾ, ದೈವಜ್ಞಾನ ತಿಳಿದ ವ್ಯಕ್ತಿಯನ್ನು ಬೇಕೆಂದು ತಿಳಿಸುತ್ತಾ, ತ್ರೈತ ಸಿದ್ಧಾಂತ ತಿಳಿದ ಜ್ಞಾನಿಯನ್ನೇ ದ್ರಾವಿಡ ಬ್ರಾಹ್ಮಣ ಎನ್ನಬೇಕೆಂದು

ಪ್ರಮುಖರ ಲೇಖ



# ಇಂದೂ ದೇಶವೇ ಇಂಡಿಯಾ!

ಹಿಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

**visit website : www.thraithashakam.org**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.
2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.
3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.
4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.
5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.
6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







## ಸುವಾರ್ತ ಕ್ರೈಸ್ತವ ಸಂಘ (S.K.S)

(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org



*www. suvarthakraisthavasangham.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ




(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

**(Regd.No.: 459/2011)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

**e-mail id : info@khudaislamicspiritualsociety.org**

***www. khudaislamicspiritualsociety.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ



ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ–509381

e-mail id : info@dravidashreshtisangham.org

***www.dravidashreshtisangham.org***

# ಮರಣ ರಹಸ್ಯ




Author :
The Only Guru of Three Religions
The Spiritual Emperor, Thraitha Theorem Originator
**Sri Acharya Prabodhananda Yogeeshwarulu**

**www.thraithashakam.org**